# Utpalakumari



# ಉತ್ಪಲಕುಮಾರಿ

ಅರಮನೆ ವಿದ್ವಾಂಸರಾದ

ನಂಜನಗೂಡು ಶ್ರೀಕಂಠಶಾಸ್ತ್ರಿಗಳಿಂದ ರಚಿಸಲ್ಪಟ್ಟುದು



MYSORE

THE GENERAL AGENCY, PRINTERS & PUBLISHERS

1908.

DEDICATED

WITH KIND PERMISSION

TO

**RAI BAHADUR A. NARASIMHA IYENGAR**

RAJAKARYA PRASAKTHA

PATRON OF THE KANNADA LITERATURE

BY

THE AUTHOR

# ವಿಜ್ಞಾಪನೆ.

—:o:—

ಶ್ರೀಮನ್ಮಹಾರಾಜಾ ಶ್ರೀಕೃಷ್ಣರಾಜ ಒಡೆಯರ್ ಬಹದ್ದೂರ್ ಜಿ. ಸಿ. ಎಸ್. ಐ. ಯವರ ಪ್ರೋತ್ಸಾಹಬಲದಿಂದ ಕರ್ಣಾಟಕ ಗ್ರಂಥರಚನಾತತ್ಪರನಾಗಿರುವ ನಾನು “ಕನಕಲತಾ” “ನಿರುಪಮಾ” “ಪ್ರಿಯದರ್ಶಿಕಾ” ಇತ್ಯಾದಿ ಗ್ರಂಥಗಳನ್ನು ವಿರಚಿಸಿ ಕನ್ನಡಿಗರ ಪರಾಮರ್ಶಕ್ಕೊಪ್ಪಿಸಿರುವುದು ಸರ್ವವಿದಿತವಷ್ಟೆ. ಇವುಗಳಲ್ಲಿ “ಕನಕಲತಾಪರಿಣಯವನ್ನು” ಸಕಲಕಲಾಶಾಲಾಧ್ಯಕ್ಷರು ಎಫ್. ಎ. ಪರೀಕ್ಷೆಗೆ ಪಠನೀಯ ಗ್ರಂಥವನ್ನಾಗಿ ಸ್ವೀಕರಿಸಿರುವುದರಿಂದ ನನ್ನ ಶ್ರಮಕ್ಕೆ ತಕ್ಕ ಪ್ರೋತ್ಸಾಹವೂ ಫಲವೂ ಯಥಾ ಲಭ್ಯವಾಗಿ ಉಂಟಾಯಿತು. ಈಗ ನನ್ನ ಮಿತ್ರರನೇಕರ ಅಭಿಪ್ರಾಯಾನುಸಾರವಾಗಿ ಸನ್ಮಿತ್ರ ಕುಮಿತ್ರರ ವ್ಯತ್ಯಾಸವನ್ನು ತೋರ್ಪಡಿಸಲಕ್ಕೆ ಈ ನವೀನ ರೂಪಕವನ್ನೂ ಬರೆದು ರಸಿಕರಡಿದಾವರೆಗೊಪ್ಪಿಸಿರುವೆನು.

ಇದನ್ನು ಪ್ರತಿ ಮಾಸದಲ್ಲಿಯೂ ರಾಜಧಾನಿಯಲ್ಲಿ ಪ್ರಚಾರವಾಗುತ್ತಿರುವ “ಅವಕಾಶತೋಷಿಣಿ” ಮಾಸಪತ್ರಿಕೆಯ ಪ್ರಕಾಶಕರಾದ ಮ॥ ರಾ॥ ಎಸ್. ರಾಮಚಂದ್ರರಾಯರವರು ತಮ್ಮ ಪತ್ರಿಕೆಯಲ್ಲಿ ಮುದ್ರಿಸಿ ಪ್ರಚಾರಪಡಿಸಿ ಕೊಟ್ಟುದಕ್ಕೋಸ್ಕರ ಅವರ ಉಪಕಾರವು ಚಿರಸ್ಮರಣೀಯವಾಗಿರುವುದು.

ಗುಣೈಕದೃಕ್ಕುಗಳು ತಮ್ಮ ಅವಕಾಶಸಮಯದಲ್ಲಿ ನನ್ನ ಈ ಗ್ರಂಥಕ್ಕೂ ಸ್ವಲ್ಪವನ್ನು ವಿನಿಯೋಗಿಸಿದರೆ ನನ್ನ ಶ್ರಮವು ಸಫಲವಾದೀತೆಂದು ಪ್ರಾರ್ಥಿಸುವ,

ಅರಮನೇ ವಿದ್ವಾಂಸ,
ನಂಜನಗೂಡು, ಶ್ರೀಕಂಠಶಾಸ್ತ್ರಿ,
ಕೃಷ್ಣರಾಜಮೊಹಲ್ಲಾ ಮೈಸೂರು.

ಶ್ರೀ

# ಉತ್ಪಲಕುಮಾರಿ.

—:o:—

## ಪ್ರಥಮಾಂಕಂ.

(ನಾಂದೀ)

ವೃ|| ಶ್ರೀಗೌರೀಮುಖಪಂಕಜ ಭ್ರಮರ ನುನ್ಮೀಲತ್ಕೃಪಾಸಾಗರಂ |
ಯೋಗೀಂದ್ರಾತ್ಮಜಪಾಲನೈಕ ಚತುರಂ ಮಾತಂಗಚರ್ಮಾಂಬರಂ||
ನಾಗೇಂದ್ರಾಭರಣೋಲ್ಲಸನ್ನಿಜಶಿರಂ ಗಂಗಾಧರಂ ಸಾದರಂ|
ರಾಗಂದಾಳ್ದು ನಿರಂತರಂ ಪೊರೆಗೆತಾಂ ಭವ್ಯಾಂಗನಾಸುಂದರಂ||೧||

(ನಾಂದ್ಯಂತದಲ್ಲಿ ಸೂತ್ರಧಾರನ ಪ್ರವೇಶ)

ಸೂತ್ರಧಾರ. ಕಂ|| ಕ್ಷಿತಿಧರನಂದಿನಿಖಿಲವನೀ|
ಪತಿವರಕೃಷ್ಣೇಂದ್ರಭವ್ಯದಾಯಿನಿ ಜನನೀ ||
ಶಿತಿಕಂಠಸಮಾಹ್ಲಾದಿನಿ |
ನುತತಾಪಸಮಂಡಲೈಕಪಾಲಿನಿ ಪೊರೆಯ್ಗಾ|| ೨ ||.

(ಎಂದು ತೆರೆಯಕಡೆ ತಿರುಗಿ) ಮಾರಿಷನೇ, ಇತ್ತಬಾ.

ಪಾರಿಪಾರ್ಶ್ವಕ. (ಪ್ರವೇಶಿಸಿ) ಆರ್ಯ ಇದೊ ಬಂದಿರುವೆನು. ಏನಪ್ಪಣೆ

ಸೂತ್ರಧಾರ. ಶ್ರೀಮತ್ಕರ್ಣಾಟಕ ಸಿಂಹಾಸನಾಧೀಶ್ವರನ ಪಾದಸೇವೆಗೋಸ್ಕರ ನಾನಾದಿಗ್ದೇಶಗಳಿಂದ ಬಂದು ಸೇರಿರುವ ಈ ಸಾಮಾಜಿಕರು ಶರದುತ್ಸವಾವಲೋಕನದಿಂದ ಸಂತುಷ್ಟಮಾನಸರಾಗಿ ಅವಶಿಷ್ಟಕಾಲವನ್ನು ಒಂದಾನೊಂದು ನವೀನ ರೂಪಕಾವಲೋಕನದಿಂದ ಕಳೆಯಬೇಕೆಂದು ಯೋಚಿಸಿ "ಉತ್ಪಲಕುಮಾರೀ ವಿಲಾಸ," ವನ್ನಭಿನಯಿಸಬೇಕೆಂದು ನನಗಾಜ್ಞಾಪಿಸಿರುವರು. ಆದ್ದರಿಂದ ನೀನು ನಮ್ಮ ನಟವರ್ಗವನ್ನು ಜಾಗ್ರತೆಗೊಳಿಸು.

ಪಾರಿಪಾರ್ಶ್ವಕ. ಆರ್ಯ ಅದನ್ನು ಬರೆದ ಕವಿಯು ಯಾರು.

ಸೂತ್ರಧಾರ. ಕಂ|| ವರಕರ್ಣಾಟಕಚಕ್ರೇ |
ಶ್ವರಕೃಷ್ಣಕ್ಷೋಣಿಪಾಲನಾಸಂಮುಖದೊಳ್ ||
ಗರಪುರನಿಲಯಂ ವಿನಯಂ |
ಮೆರೆವಂ ಶ್ರೀಕಂಠನಾಮಸುದ್ಯತ್ಪ್ರೇಮಂ|| ೩ ||

ಪಾರಿಪಾರ್ಶ್ವಕ. ಆರ್ಯ ಇದೇ ಆತನ ಪ್ರಥಮ ಪ್ರಯತ್ನವೋ.

ಸೂತ್ರಧಾರ. ವತ್ಸ ನಿನಗೆ ತಿಳಿಯದೋ ಆದರೆ ಕೇಳು.

ಕಂ|| ಮೆರೆವಾಪ್ರಿಯದರ್ಶಿಕೆಯುಂ|
ವರಕೃಷ್ಣವಿಜಯಮು ಮೊಪ್ಪುವಾಕನಕಲತಾ||
ಪರಿಣಯಮುಂ ನಿರುಪಮೆಯುಂ|
ಕರಮೆಸೆವುತ್ಪಲಕುಮಾರಿಯುಂ ತತ್ಕೃತಿಗಳ್ ||೪ ||

ಪಾರಿಪಾರ್ಶ್ವಕ. ಆರ್ಯ ಈತನಿಗೆ ಕವಿತಾಶಕ್ತಿಯುಂಟಾದ ಬಗೆ ಹೇಗೆ.

ಸೂತ್ರಧಾರ. ವತ್ಸ ಈತನಸಂತತಿಗೆ ನಿಸರ್ಗಸುಲಭವೆನಿಸಿರುವ ಕವಿತಾಶಕ್ತಿಯು ಈತನಿಗುಂಟಾಗಿರತಕ್ಕುದೇನಾಶ್ಚರ್ಯವೆ ಇದೂ ಅಲ್ಲದೆ ಈತನು ನಿಜಗುರುವಿನಾಶೀರ್ವಾದವನ್ನೂ ದೇವತಾನುಗ್ರಹವನ್ನೂ ಸ್ವಪಾಂಡಿತ್ಯವನ್ನೂ ವಿದ್ವಾಂಸರ ಸಾಹಚರ್ಯವನ್ನೂ ಪಡೆದಿರುವುದರಿಂದ ಇದು ಅಸಾಧ್ಯವಲ್ಲ.

ಪಾರಿಪಾರ್ಶ್ವಕ. ಆರ್ಯ ಹಾಗಾದರೆ ವಿದ್ವಾಂಸರ ಸಾಹಚರ್ಯವೂ ಕವಿತಾಶಕ್ತಿಯನ್ನುಂಟುಮಾಡಬಲ್ಲುದೆ.

ಸೂತ್ರಧಾರ. ಸಂದೇಹವೇಕೆ. ಸಹವಾಸದಿಂದಲೇ ಸಕಲವಿಧವಾದ ಗುಣದೋಷಗಳುಂಟಾಗುವುದಲ್ಲವೆ ಕೇಳು.

ವೃ|| ರಸಿಕರ ಸಂಗವೊಂದೆ ರಸಿಕಂ ಕವಿಸಂಗಮನೊಂದೆ ಕಬ್ಬಿಗಂ|
ರಸೆಯೊಳಗೊಪ್ಪುವಾ ಮುನಿಯಸಂಗಮನೊಂದಿರೆಮೌನಿಯಾಗುವಂ||
ಪಿಸುಣರ ಸಂಗವೊಂದೆ ಪಿಸುಣಂ ವಿಟಸಂಗಮನೊಂದೆಜಾರ ನಾ|
ಲಿಸು ವಿಗೆಸಂಗಮೇ ಸುಗುಣದುರ್ಗುಣ ಜಾಲಕೆಕಾರಣಂಗಡಾ||೫||

ಅಮರದತ್ತ. ( ತೆರೆಯಲ್ಲಿ ) ಭಾಪು ಭಾಪು ಭರತಪುತ್ರ ನಿನ್ನಮಾತು ಸತ್ಯವಾದುದು. ಇದರಲ್ಲಿ ಸಂದೇಹವೇಕೆ. ( ವೃ|| ರಸಿಕರಸಂಗವೊದೆಂ

ಇತ್ಯಾದಿಯನ್ನು ಹೇಳುವನು. )

ಸೂತ್ರಧಾರ. ( ತೆರೆಯಕಡೆ ನೋಡಿ ) ಮಾರಿಷನೆ ವಿಲಾಸಚಂದ್ರನ ಆಪ್ತಮಿತ್ರನಾದ ಅಮರದತ್ತನು ನನ್ನ ಮಾತಿನಿಂದ ಸಂತುಷ್ಟನಾಗಿ ಇತ್ತಕಡೆ ಬರುತ್ತಿರುವನು. ಆದ್ದರಿಂದ ನಡೆ. ನಾವು ಹೋಗಿ ಪ್ರಕೃತೋಚಿತ ಕಾರ್ಯದಲ್ಲಿ ಜಾಗರೂಕರಾಗಿರೋಣ.

ಪಾರಿಪಾರ್ಶ್ವಕ. ಅಪ್ಪಣೆ. ( ಎಂದು ಸೂತ್ರಧಾರನೊಡನೆ ಹೊರಟು ಹೋಗುವನು. )

||ಇದು ಪ್ರಸ್ತಾವನೆ||

( ಅನಂತರ ಅಮರದತ್ತನ ಪ್ರವೇಶ. )

ಅಮರದತ್ತ. ( ವೃ|| ರಸಿಕರಸಂಗವೊಂದೆರಸಿಕಂ—ಎಂಬ ವೃತ್ತವನ್ನು ಹೇಳುತ್ತಾ ಪ್ರವೇಶಿಸಿ ) ಹಾಗಲ್ಲದಿದ್ದರೆ ವಿನೀತನೂ ವಿದ್ಯಾವಂತನೂ ಆದ ನಮ್ಮ ವಿಲಾಸಚಂದ್ರನು ಹೀಗೆ ದುರ್ಮಾರ್ಗಪ್ರವರ್ತಕನಾಗುತ್ತಿದ್ದನೇ. ಅನೀಚನಾದ ಕೌಟಿಲ್ಯಶೇಖರನ ಸಹವಾಸವೇ ನನ್ನ ಮಿತ್ರನಿಗಿಂಥಾ ವಿಪರೀತ ಬುದ್ಧಿಯನ್ನುಂಟುಮಾಡಿರುವುದು. ಸಂದೇಹವೇಕೆ ನನ್ನ ಅಭಿಪ್ರಾಯಾನುಸಾರವಾಗಿಯೇ ನಡೆದುಕೊಳ್ಳುತ್ತಾ ನನ್ನೆಡೆಬಿಡದಿದ್ದ ನನ್ನ ಮಿತ್ರನಿಗೆ ಈಗ ನನ್ನಲ್ಲಿಯೂ ದ್ವೇಷವುಂಟಾಗಿರುವುದಲ್ಲಾ ವೇಶ್ಯೆಯರಲ್ಲಿ ದೋಷಾರೋಪಣೆಯನ್ನು ಮಾಡುತ್ತಾ ಅವರನ್ನು ನಿಂದಿಸುತ್ತಿದ್ದವನು ಈಗ ಮಧುಮತಿಯೆಂಬ ವೇಶ್ಯೆಯ ಮನೆಯಲ್ಲಿಯೇ ತ್ರಿಕಾಲದಲ್ಲಿಯೂ ವಿಹರಿಸುತ್ತಾ ತನ್ನ ಅಪರಿಮಿತವಾದ ಐಶ್ವರ್ಯಕ್ಕೆ ಕೊನೆಗಾಣಿಸುತ್ತಿರುವನಲ್ಲಾ. ಈ ಎಲೆಸಹವಾಸವೆನಿನ್ನ ಮಹಿಮೆಯು ವರ್ಣನಾತೀತವಾದುದೇ ಸರಿ.

ಕಂ|| ಖಲರೆನಿಪರಲ್ತೆಸಜ್ಜನ|
ರಿಳೆಯೊಳ್ದುರ್ಜನರು ಮರರೆಸಜ್ಜನರೆನಿಪರ್||
ನಲವುಂದುಗುಡಮುಮ್ಮೈದುಗು|
ಮೆಲೆಸಂಗಮೆನಿನ್ನಮೈಮೆಬಣ್ಣಿಸಲರಿದೈ|| ೬ ||

ಈಗಲಾದರೋ ದುಷ್ಟನಾದ ಕೌಟಿಲ್ಯನು ನನ್ನ ಮಿತ್ರನ ಐಶ್ವರ್ಯವನ್ನೆಲ್ಲಾ ಆಮಧುಮತಿಗೆ ಕೊಡಿಸಬೇಕೆಂದು ಪ್ರಯತ್ನಿಸುತ್ತಿರುವನು

ಇವರ ರಹಸ್ಯ ಗಳನ್ನೆಲ್ಲಾ ಭೇದಿಸುವದಕೋಸ್ಕರ ನಾನು ನನ್ನ ಆಪ್ತ ಸೇವಕನಾದಬಂಧುರಕನನ್ನು ಗೂಢಚಾರನನ್ನಾಗಿ ಕಳುಹಿಸಿರುವೆನು. ಒಳ್ಳೇದಿರಲಿ. ಸಜ್ಜನರಿಗೆ ದೈವವೇ ಸಹಾಯಕಾರಿಯಲ್ಲವೇ. (ಎಂದು ತಿರುಗಿನೋಡಿ) ಇದೇನು ಈದುಷ್ಟನು ಜಾಗ್ರತೆಯಾಗಿ ಬ ಬರುತ್ತಿರುವನು.

( ಅನಂತರ ಕೌಟಿಲ್ಯಶೇಖರನು ಬಹುತ್ವರೆಯಾಗಿ ಪ್ರವೇಶಿಸುವನು. )

ಅಮರದತ್ತ. ಅಯ್ಯೋ ಕೌಟಿಲ್ಯಶೇಖರನೇ. ಇದೇನು ನನ್ನನ್ನು ಕಂಡರೂ ಕಾಣದವನಂತೆ ಹೋಗುತ್ತಿರುವೆ.

ಕೌಟಿಲ್ಯಶೇಖರ. ಓಹೋ ಯಾರು ಅಮರದತ್ತನೋ?

ಅಮರದತ್ತ. ಅಯ್ಯಾ ಹೌದು ಇದೇನು ಇಷ್ಟುಜಾಗ್ರತೆಯಾಗಿ ಬರುತ್ತಿರುವೆ ?

ಕೌಟಿಲ್ಯ. ಅದನ್ನು ನಾನು ನಿನಗೆತಿಳಿಸಬೇಕಾದ ಅವಶ್ಯಕತೆಯಿಲ್ಲವಷ್ಟೆ.

ಅಮರದತ್ತ. ಅಯ್ಯೋ. ಅದನ್ನು ನೀನು ತಿಳಿಸದಿದ್ದರೂ ಚಿಂತೆಯಿಲ್ಲ. ವಿಲಾಸಚಂದ್ರನೆಲ್ಲಿರುವನು.

ಕೌಟಿಲ್ಯ. ಎಲ್ಲಿರಬಹುದೋ ಅಲ್ಲಿಯೇ ಇರುವನು.

ಅಮರದತ್ತ. ಓಹೋ ಹಾಗೋ ನೀನು ಮಾತನಾಡುವುದರಲ್ಲಿ ಬಹಳ ಚತುರನೆಂಬುದು ಈಗ ವ್ಯಕ್ತವಾಯಿತು.

ಕೌಟಿಲ್ಯ. ಏನು ನನ್ನನ್ನು ಮಾತನಾಡುವುದರಲ್ಲಿ ಮಾತ್ರಚತುರನೆಂದು ಪರಿಹಾಸ ಮಾಡುವೆಯೋ.

ಅಮರದತ್ತ. ಇಲ್ಲ ಎಂದಿಗೂ ಇಲ್ಲ ತಂತ್ರದಲ್ಲಿಯೂ ನಿಪುಣನೆಂದು ಬಲ್ಲೆ.

ಕೌಟಿಲ್ಯ. ಎಲಾ ದುಷ್ಟನೇ ಸುಮ್ಮನೆ ಹೋಗು ನನ್ನ ಸಾಹಸವನ್ನು ನೀನು ತಿಳಿಯದ ಕಾರಣ ಹೀಗೆ ಹರಟುತ್ತಿರುವೆ.

ಅಮರದತ್ತ. (ಕೋಪದಿಂದ ನಗುತ್ತಾ) ಆಃ ನಿನ್ನ ಸಾಹಸವನ್ನು ನಾನರಿಯೆನೇ ನಿನ್ನ ಸಾಹಸವು ಅಸಾಧಾರಣವಾದದ್ದು. ಅನ್ಯಾದೃಶವಾದದ್ದು. ಘೋರತರವಾದದ್ದು. ವಿಪತ್ಕರವಾದದ್ದು. ಇಂಥಾ ನಿನ್ನ ಸಾಹಸವನ್ನೂ ಅದರಿಂದ ಸಂಭವಿಸಬಹುದಾದ ದುಷ್ಫಲವನ್ನೂ ಚೆನ್ನಾಗಿಬಲ್ಲೆ.

ಕೌಟಿಲ್ಯ. ಎಲಾ ನೀಚನೇ ಸ್ವೇಚ್ಛೆಯಾಗಿ ಮಾತನಾಡಿರುವೆ. ಇರಲಿ ಇದರ ಪರಿಣಾಮವನ್ನು ಜಾಗ್ರತೆಯಾಗಿ ನೀನೇನೋಡುವೆ.

ಅಮರದತ್ತ. ನೋಡುವುದೇನು ? ಇದರ ಪರಿಣಾಮವನ್ನೂ ನಿನ್ನ ಪರಿಣಾಮವನ್ನೂ ತಿಳಿದುಕೊಂಡೇ ಇರುವೆನು. ನಿನ್ನೊಡನೆ ಮಾತನಾಡಿ ಫಲ ವಿಲ್ಲ, ಹೋಗು.

ಕೌಟಿಲ್ಯ. ಅದರ ಫಲವನ್ನು ಈಗಲೇ ಅನುಭವಿಸಬೇಕೋ ?

ಅಮರದತ್ತ. ಎಲಾ ಮಿತ್ರದ್ರೋಹೀ ಪರಮಪಾಪೀ ನಿನ್ನಿಂದೇನಾದಿತು.

ಕೌಟಿಲ್ಯ ಛೀ. ಹೇಡಿಯೇ (ಎಂದು ಅಮರದತ್ತನನ್ನು ಹೊಡೆಯುವನು.)

ಅಮರದತ್ತ. ಓಹೋ. ಸಾಕು ಸಾಕು. ಶ್ರಮಪಡಬೇಡ. (ಎಂದು ಕೌಟಿಲ್ಯನ ಕೈಗಳನ್ನು ಹಿಡಿದುಕೊಳ್ಳುವನು)

(ಅಮರದತ್ತ ಕೌಟಿಲ್ಯ ಶೇಖರರಿಬ್ಬರೂ ಹೊಡೆದಾಡುತ್ತಿರುವರು)

(ಆಗವಿಲಾಸಚಂದ್ರನ ಪ್ರವೇಶ)

ವಿಲಾಸಚಂದ್ರ. ಎಲಾ, ಮಿತ್ರದ್ರೋಹಿಯಾದ ಅಮರದತ್ತನೇ. ಅವನನ್ನು ಬಿಡು ನಿನ್ನ ಸಾಹಸವನ್ನು ನನ್ನಮೇಲೆ ತೋರಿಸು (ಎಂದು ಅಮರದತ್ತನನ್ನು ಎಳೆಯುವನು)

ಅಮರದತ್ತ. ಮಿತ್ರನೇ. ವಿಲಾಸಚಂದ್ರನೇ. ನಿಶ್ಚಯಾಂಶವನ್ನು ತಿಳಿಯದೇ ನೀನೂ ನನ್ನಮೇಲೆ ಕೋಪಿಸಬಹುದೇ.

ವಿಲಾಸಚಂದ್ರ. ನಾನು ನಿಶ್ಚಯಾಂಶವನ್ನು ತಿಳಿದುಕೊಂಡೇ ಇರುವೆನು. ಸಾಕು. ಸುಮ್ಮನೆ ಹೋಗು.

ಅಮರದತ್ತ ಅಯ್ಯಾ. ನಾನು ಯಾವಾಗಲೂ ನಿನಗೆ ಕೇಡನ್ನೆಣಿಸುವವನಲ್ಲ. ಈ ನೀಚನೇ ನನ್ನಮೇಲೆ ಕ್ಷುದ್ರವನ್ನು ಹೇಳಿ ನಿನಗೆ ನನ್ನಲ್ಲಿ ದ್ವೇಷ ವನ್ನುಂಟುಮಾಡಿರುವನು. ವಿದ್ಯಾವಂತನಾಗಿ ಸಕಲವನ್ನೂ ತಿಳಿದವ ನಾಗಿರುವ ನೀನು ಸ್ವಲ್ಪವಾದರೂ ಪರ್ಯಾಲೋಚಿಸದೆ ಹೀಗೆ ದುಡುಕಬಹುದೇ

ವಿಲಾಸಚಂದ್ರ. ಎಲೋ ಮಿತ್ರದ್ರೋಹೀ, ಹೆಚ್ಚಾಗಿ ಮಾತನಾಡಿ ಫಲವಿಲ್ಲ, ಸುಮ್ಮನೆ ಹೋಗು.

ಅಮರದತ್ತ. ಮಿತ್ರನೇ ನನ್ನನ್ನು ನೀನು ಹೇಗೆಬೇಕಾದರೂ ಭಾವಿಸು. ಈ ನೀಚ ನನ್ನು ಮಾತ್ರ ನಿನ್ನ ಬಳಿಯಲ್ಲಿ ಸೇರಿಸಬೇಡ.

ವಿಲಾಸಚಂದ್ರ. ಛೀ, ದುಷ್ಟನೇ ನಿನ್ನ ಛಲವನ್ನು ಬಿಡುವುದಿಲ್ಲವೇ (ಎಂದು ಅಮರ

ದತ್ತನ ಕೆನ್ನೆಯಮೇಲೆ ಹೊಡೆಯುವನು)

ಅಮರದತ್ತ. ಮಿತ್ರನೇ ವಿಲಾಸಚಂದ್ರನೇ ನೀನು ನನ್ನನ್ನು ಏನುಬೇಕಾದರೂ ಮಾಡು. ನಾನದನ್ನು ಲಕ್ಷಿಸತಕ್ಕವನಲ್ಲ. ಮುಖ್ಯವಾಗಿ ದೇವರು ನಿನಗೆ ಶುಭವನ್ನುಂಟುಮಾಡಲಿ.

ವಿಲಾಸಚಂದ್ರ. (ಕೋಪದಿಂದನಗುತ್ತಾ) ದೇವರು ಶುಭವನ್ನುಂಟುಮಾಡಬೇಕೋ.

ಕೌಟಿಲ್ಯ. (ನಗುತ್ತಾ) ಆಃ. ಎಷ್ಟು ಚೆನ್ನಾಗಿ ದೇವರನ್ನು ಪ್ರಾರ್ಥಿಸುವನು!

ಅಮರದತ್ತ. ಎಲಾ ಕೌಟಿಲ್ಯನೇ ತಿರುಗೀ ಮಾತನಾಡುವೆಯಾ ನಿನಗೆಲಜ್ಜೆ ಯಿಲ್ಲವೆ.

ಕೌಟಿಲ್ಯ. (ಅಮರದತ್ತನನ್ನು ಒದೆಯುವನು)

(ಅಮರದತ್ತ ಕೌಟಿಲ್ಯಶೇಖರರಿಬ್ಬರೂ ತಿರುಗೀ ಹೊಡೆದಾಡುವಾಗ)

ವಿಲಾಸಚಂದ್ರ. (ತನ್ನ ಶಕ್ತಿಯನ್ನೆಲ್ಲಾ ಪ್ರಯೋಗಿಸಿ ಅಮರದತ್ತನನ್ನು ಹೊಡೆಯಲು ಅಮರದತ್ತನು ಮೂರ್ಛಾಕ್ರಾಂತನಾಗಿ ಬೀಳುವನು)

ಕೌಟಿಲ್ಯ. ಮಿತ್ರನೇ ಇನ್ನು ನಾವಿಲ್ಲಿರುವುದು ಸರಿಯಲ್ಲ. ನಡೆ ನಾವು ಹೊರಟು ಹೋಗೋಣ (ಎಂದು ವಿಲಾಸಚಂದ್ರನೊಡನೆ ಹೊರಟು ಹೋಗುವನು)

(ಅನಂತರ ಪತ್ರಹಸ್ತನಾದ ಬಂಧುರಕನ ಪ್ರವೇಶ)

ಬಂಧುರಕ. ವೃ|| ಸರಸಮನಾಡುವರ್ ನಲಿದುಬೇಡುವರಪ್ಪುವರಾಡುತೊಪ್ಪುವರ್|
ಭರದೆ ಕನಲ್ವರಾತ್ಮವಿಟರಂ ಮಿಗೆಬಯ್ದು ಪರ್ೈದೆ ಸುಯ್ದುವರ್||
ತರುಣರ ಚಿತ್ತಮಂ ಕೊರೆವರೀಧರೆಯೊಳ್ ಮೆರೆವನಿರಂತರಂ|
ಪರಿಕಿಸೆವಾರನಾರಿಯರದೇನಸೊಡರ್ಚರೊಮಾಯಗಾತಿಯರ್||೬

ಆಃ ಲೋಕದಲ್ಲಿ ವೇಶ್ಯೆಯರ ಸ್ವಭಾವವೇ ಇಂಥಾದ್ದೋ ಇಲ್ಲವೇ ಬಹುಜನರ ಸಹವಾಸದಿಂದ ಈ ದುರ್ಗುಣಗಳುಂಟಾಗುವುವೋ ತಿಳಿಯದು. ಇದುವರೆಗೂ ಆ ಕೌಟಿಲ್ಯಶೇಖರನು ಮಧುಮತಿಗೆ ತನ್ನ ಧನವನ್ನೆಲ್ಲಾ ಸೂರೆಕೊಟ್ಟು ಈಗವಿಲಾಸಚಂದ್ರನ ಐಶ್ವರ್ಯವನ್ನೂ ನಿರ್ಮೂಲವಮಾಡಿಸುವುದಕ್ಕೆ ಪ್ರಯತ್ನಿಸಿರುವನು. ಇಷ್ಟಾದರೂ ಆನೀಚಳ ಆಸೆಯು ಬೇರೇ ಪೂರ್ತಿಯಾಗಲಿಲ್ಲವಲ್ಲ. ಕೌಟಿಲ್ಯನು

ಅವಳ ಸೌಂದರ್ಯದಿಂದ ಮುಗ್ಧನಾಗಿ ಅವಳನ್ನು ಪ್ರೀತಿಸಿ ದಾಸಾನುದಾಸನಾಗಿ ನಡೆದುಕೊಳ್ಳುತ್ತಿರುವನಲ್ಲದೆ ಅವಳು ಇವನನ್ನು ಲಕ್ಷಿಸುವುದೇ ಇಲ್ಲ. ಕೌಟಿಲ್ಯನು ಕಳುಹಿಸಿರುವನೆಂದು ನಾನೀ ಕಾಗದವನ್ನವಳಿಗೆ ಕೊಟ್ಟರೆ ಅವಳಿದನ್ನೊಡೆದು ಒಂದು ಸಲವಾದರೂ ನೋಡದೆ ಅಲ್ಲಿ ಬಿಸಾಡಿ ನನಗೆ ಪ್ರತ್ಯುತ್ತರವನ್ನೂ ಹೇಳದೆ ಹೊರಟು ಹೋದಳಲ್ಲಾ. ಒಳ್ಳೇದು ಈ ಕಾಗದವನ್ನು ನಮ್ಮೊಡೆಯನಾದ ಅಮರದತ್ತನಿಗೆ ಕೊಡುವೆನು. ಅವನಿಗಿದರಿಂದೇನಾದರೂ ಪ್ರಯೋಜನವಾದೀತೇನೊ ನೋಡೋಣ. (ಎಂದು ಮುಂದೆ ಮೂರ್ಛಿತನಾಗಿಬಿದ್ದಿದ್ದ ಅಮರದತ್ತನನ್ನು ಕಂಡು) ಇದೇ ನಿಲ್ಲಿ ಮಲಗಿರುವವರು ಯಾರು ! ಅಯ್ಯೋ ಇನ್ನೇನುಗತಿ, ನಮ್ಮೊಡೆಯನಾದ ಅಮರದತ್ತನಿಗೆ ಹೀಗೆ ಮಾಡಿದ ದುಷ್ಟರು ಯಾರೋ ಕಾಣೆನಲ್ಲಾ. (ಎಂದು ಶೈತ್ಯೋಪಚಾರವಮಾಡಿ ಎಚ್ಚರಿಸಿ)

ಬಂಧುರಕ. ಅಯ್ಯಾ. ಇದೇನು

ಅಮರದತ್ತ. ಸತ್ಯವಂತನಿಗಾಗ ಬೇಕಾದಗತಿ.

ಬಂಧುರಕ. ಏನು ಆನೀಚರು ಹೀಗೆ ಮಾಡಿದರೇ.

ಅಮರದತ್ತ. ಅವರೇನು ಬೇಕಾದರೂ ಮಾಡಲಿ. ನಾನದನ್ನು ಲಕ್ಷಿಸುವವನಲ್ಲ. ಮಿತ್ರನಾದ ವಿಲಾಸಚಂದ್ರನು ಸುಖಿಯಾಗಿದ್ದರೆ ಸಾಕು. ಅದು ಹಾಗಿರಲಿ. ನಮ್ಮ ಪ್ರಯತ್ನವೇನಾದರೂ ಸಫಲವಾದೀತೋ.

ಬಂಧುರಕ. ಅಯ್ಯಾ. ನಾವೀ ರಾಜಮಾರ್ಗದಲ್ಲಿ ಮಾತನಾಡುವುದು ಸರಿಯಲ್ಲ. ಈ ದಿನ ಸಾಯಂಕಾಲ ನಾನುಮನೆಗೆಬರುವೆನು. ಅನಂತರ ಸಕಲವೂ ವಿಶದವಾಗಿ ತಿಳಿಯುವುದು. ಈ ಪತ್ರಿಕೆಯನ್ನು ಸಂಪಾದಿಸಿಕೊಂಡು ಬಂದಿರುವೆನು. ಇದರಿಂದ ನಿನ್ನ ಕಾರ್ಯವೇನಾದರೂ ಸಫಲವಾದೀತೋ ಏನೋ ನೋಡು. (ಎಂದು ಕೊಡುವನು.)

ಅಮರದತ್ತ. (ಅದನ್ನು ತೆಗೆದು ಕೊಂಡು) ಅಯ್ಯಾ. ಇದೆಲ್ಲಿ ಸಿಕ್ಕಿತು?

ಬಂಧುರಕ. ಕೌಟಿಲ್ಯನು ಇದನ್ನು ಮಧುಮತಿಗೆ ಕೊಡಬೇಕೆಂದು ಹೇಳಿ ಕಳುಹಿಸಿದನು. ನಾನಿದನ್ನವಳಿಗೆ ಕೊಡಲು ಅವಳು ಇದನ್ನು ಒಂದು

ಸಲವಾದರೂ ನೋಡದೆ ಕಸಕ್ಕಿಂತಕಡೆಯಾಗಿ ಭಾವಿಸಿ ಅಲ್ಲಿಯೇ ಬಿಸಾಡಿ ಹೊರಟುಹೋದಳು. ಇದರಿಂದ ನಮ್ಮ ಕಾರ್ಯವೇನಾದರೂ ಅನುಕೂಲಿಸ ಬಹುದೆಂದೆಣಿಸಿ ನಾನುತಂದೆನು. ಇನ್ನು ನಾನು ಹೋಗಿಬರುವೆನು. ( ಎಂದು ಹೊರಟು ಹೋಗುವನು. )

ಅಮರದತ್ತ. ( ಪತ್ರಿಕೆಯನ್ನೊಡೆದೋದುವನು ) ಪ್ರಿಯತಮಳಾದ ಮಧುಮತಿ ನನ್ನ ಆಲೋಚನೆಯೆಲ್ಲಾ ಕೈಗೂಡುವಂತಿರುವುದು. ವಿಲಾಸಚಂದ್ರನು ನಿನಗೋಸ್ಕರವಾಗಿ ತನ್ನ ಮನೆಯಲ್ಲಿದ್ದ ಆಭರಣಗಳನ್ನೆಲ್ಲಾ ನನ್ನ ವಶಕ್ಕೆ ಕೊಟ್ಟಿರುವನು. ಅನೀಚನಾದ ಅಮರದತ್ತನನ್ನು ಸಂಹರಿಸುವವರೆಗೂ ಈ ಆಭರಣಗಳು ನನ್ನ ಬಳಿಯಲ್ಲಿಯೇ ರಹಸ್ಯವಾಗಿರಲಿ. ಮುಂದೆ ನಮ್ಮ ಸುಖಕ್ಕೆ ವಿಘ್ನವುಂಟಾಗದಂತೆ ಈಗಲೇ ಜಾಗರೂಕರಾಗಿರುವುದು ಉತ್ತಮ, ಇದನ್ನು ಬಹಿರಂಗ ಪಡಿಸದೆ ಎಚ್ಚರಿಕೆಯಾಗಿರುವೆ ಯೆಂದು ನಂಬುವ,

ನಿನ್ನ ಅನುರಾಗ ಪಾತ್ರ, " ಕೌಟಿಲ್ಯಶೇಖರಪ್ರವರ . "

(ಎಂದೋದಿ ) ಎಲಾನೀಚನಾದ ಕೌಟಿಲ್ಯನೆ! ಇಂಥಾ ಘೋರ ಕೃತ್ಯವನ್ನು ಮಾಡಬೇಕೆಂದು ಯತ್ನಿಸಿರುವೆಯಾ ? ಒಳ್ಳೇದಿರಲಿ. ಈ ಅಮರದತ್ತನ ಸಾಹಸವು ಎಂಥಾದ್ದೆಂಬುದು ಜಾಗ್ರತೆಯಲ್ಲಿ ವ್ಯಕ್ತವಾದೀತು. (ಎಂದು ಹೊರಟುಹೋಗುವನು.)

( ಅನಂತರ ವಿಲಾಸಚಂದ್ರ ಕೌಟಿಲ್ಯ ಶೇಖರರ ಪ್ರವೇಶ. )

ವಿಲಾಸಚಂದ್ರ. ಮಿತ್ರನೇ! ಈ ಪುಷ್ಕರೋದ್ಯಾನವು ಎಷ್ಟು ಮನೋಹರವಾಗಿರುವುದು. ಇತ್ತ ನೋಡು;

ಕಂ|| ತಿಲಕಂ ಕ್ರಮುಕ ಮಶೋಕಂ |
ಸಲೆ ಕುರವಕ ಮೆಂಬಕಾಂತತರುಸಂತತಿಯಿಂ||
ತೊಳಗುವ ವನವಿದು ಬಗೆವೊಡೆ|
ನಳಿನಾಸ್ತ್ರ್ಯಕಾಂತಕಾಂತವನದವೊಲೆಸೆಗುಂ || ೯ ||

ಅಯ್ಯಾ, ಮಿತ್ರನೆ? ಈ ಕುರವಕವೃಕ್ಷವನ್ನು ನೋಡಿದೆಯಾ, ಇದು ಸಾಂದ್ರವಾಗಿ ಬೆಳೆದು ಪುಷ್ಪಿಸಿರುವುದರಿಂದ ನೋಟಕರಮನಸ್ಸಿಗೆಷ್ಟು ಹರ್ಷವನ್ನುಂಟುಮಾಡುತ್ತಿರುವುದು ? (ಎಂದದರ ಬಳಿಗೆಹೋಗಿ)

ಕಂ || ವನಿತಾಕುಂಭಕುಚಾಲಿಂ |
ಗನಜನ್ಯಸುಖಕ್ಕೆ ಪಾತ್ರನಾಗುತೆ ಧರೆಯೊಳ್ ||
ಅನುಪಮ ವೈಭವ ಕಾಸ್ಪದ |
ನೆನಿಸಿರ್ದಾಪೆಯಲ್ತೆ ನೀನೆ ಕುರವಕ ಧನ್ಯಂ || ೯||

ಕೌಟಿಲ್ಯ. ಅಯ್ಯಾ ಮಿತ್ರನೇ ಪ್ರೌಢೆಯಾದ ಸ್ತ್ರೀಯು ಬಹು ಕಾಲದಿಂದ ವಿರಹಿಣಿಯಾಗಿದ್ದು ದೈವಾನುಗ್ರಹದಿಂದ ಲಭಿಸಿದ ತನ್ನ ಪ್ರಿಯನ ಕಂಠಾಲಿಂಗನೋತ್ಸವವನ್ನು ಬಹುಸಂಭ್ರಮದಿಂದ ಹೊಂದುವಂತೆ ಈ ವಾಸಂತಿಕೆಯು ತನ್ನ ಸಮೀಪದಲ್ಲಿರುವ ಅಶೋಕವೃಕ್ಷವನ್ನು ಹೇಗೆ ಸುತ್ತಿಕೊಂಡಿರುವುದು ನೋಡಿದೆಯಾ ?

ವಿಲಾಸಚಂದ್ರ. ಮಿತ್ರನೇ, ನೀನು ಹೇಳಿದುದು ನಿಶ್ಚಯ. ಇದೊ;

ಕಂ || ಸೊಗಯಿಸುವೀವಾಸಂತಿಕೆ !
ಚಿಗುರ್ಗಳ ನೆವದಿಂದೆ ರಾಗಮಂ ಸೂಸುತೆ ತಾಂ ||
ಬಿಗಿದಪ್ಪುತೀಯಶೋಕಮ |
ನೊಗುಮಿಗೆ ಸಹವಾಸದಿಂದಶೋಕ ಮೆನಿಕ್ಕುಂ ||

(ಎಂದು ಮುಂದೆಹೋಗಿ) ಪ್ರಥಮಸಮಾಗಮ ಸಮಯದಲ್ಲಿ ಪ್ರಿಯನಿದಿರಾಗಿ ನಸುನಗುತ್ತಾ ತಲೆವಾಗಿನಿಂತಿರುವ ಮುಗ್ಧೆಯಂತೆ ನೂತನವಾಗಿ ಪಲ್ಲವಿಸಿ ಪುಷ್ಪಭಾರದಿಂದ ನಮ್ರವಾಗಿರುವ ಈ ತಿಲಕ ವೃಕ್ಷವನ್ನು ನೋಡಿದೆಯಾ! (ಎಂದದರ ಬಳಿಗೆ ಹೋಗಿ)

ವೃ || ಜಲರುಹಪತ್ರನೇತ್ರೆಯರಪಾಂಗಕೆಸಿಲ್ಕಿ ದೊಡೊಮೋಧೀರನುಂ |
ಕಳವಳಮಾಂತು ಕಂದಿ ಕಳೆಗುಂದುವನಲ್ತೆ ಕಟಾಕ್ಷಘಾತದಿಂ||
ಷಲಿಯುತೆ ನಳ್ಮೆಯಿಂದೆ ಕಳೆಯೇರುವೆ ನೀನದರಿಂದೆ ಭಾಪುಭಾ|
ಪೆಲೆತಿಲಕದ್ರುಮಾಭಳಿರೆ ನಿನ್ನಯ ಬಲ್ಮೆಯೆ ಬಲ್ಮೆಯುಪ್ಪೃದೈ || ೧೧ ||

ಕೌಟಿಲ್ಯ (ಸ್ವಗತಂ) ಮಧುಮತಿಯ ಮನೆಗೆ ನಾನು ಕಳುಹಿಸಿದ್ದ ಬಂಧುರಕನು ಇಷ್ಟುಹೊತ್ತಿಗೆ ಮನೆಗೆ ಬಂದಿರಬಹುದು. ಆದ್ದರಿಂದ ಈಗ ನಾನಿಲ್ಲಿರುವುದು ಸರಿಯಲ್ಲ. (ಎಂದು ಪ್ರಕಾಶಂ) ಅಯ್ಯಾ ವಿಲಾಸಚಂದ್ರನೆ, ನನಗೇನೊಸ್ವಲ್ಪ ತಲೆನೋಯುತ್ತಿರುವುದು ಆದ್ದರಿಂದ ಮನೆಗೆ ಹೋಗುವೆನು.

ವಿಲಾಸಚಂದ್ರ. ಹಾಗಾದರೆ ನೀನು ನಡೆ. ನಾನಿಲ್ಲಿ ಸ್ವಲ್ಪಕಾಲ ವಿಹರಿಸುತ್ತಿದ್ದು

ವಿಮಲಾನದಿಯ ಕಡೆ ಸಂಚರಿಸಿಕೊಂಡು ಮನೆಗೆ ಬರುವೆನು

ಕೌಟಿಲ್ಯ. ಹಾಗೆಯೇ ಆಗಲಿ (ಎಂದು ಹೊರಟುಹೋಗುವನು)

(ತೆರೆಯಲ್ಲಿ)

ಎಲೈ ನಾಗರಿಕರಾದ ಪೌರರಾ, ಈ ಸರಸನಗರದ ಮಂತ್ರಿಯಾದ ನಿರ್ಜರಕನ ಕನ್ಯಾಕಾಪುರದಜನರು ಈ ಪುಷ್ಕರೋದ್ಯಾನಕ್ಕೆ ವಿಹಾರಾರ್ಥವಾಗಿ ಬರುವ ಕಾರಣ ಎಲ್ಲರೂ ಹೊರಟು ಹೋಗತಕ್ಕದೆಂದು ಸೈನ್ಯಾಧಿಪತಿಯಾದ ಅರಾತಿಸಿಂಹನು ಆಜ್ಞಾಪಿಸಿರುವನು. ಆದ್ದರಿಂದ ಎಲ್ಲರೂ ಜಾಗ್ರತೆಯಾಗಿ ಹೊರಟುಹೋಗತಕ್ಕದ್ದು.

ವಿಲಾಸಚಂದ್ರ. (ಸ್ವಗತ) ಏನು, ಇಲ್ಲಿಗೆ ಮಂತ್ರಿಯ ಮಗಳಾದ ಉತ್ಪಲಕುಮಾರಿಯು ವಿಹಾರಾರ್ಥವಾಗಿ ಬರುವಳೆ! ಅವಳು ಬಹಳ ಸೌಂದರ್ಯಶಾಲಿನಿಯೆಂದು ಕೇಳಿದ್ದೆನು. ಈಗ ನಾನೀ ತಿಲಕವೃಕ್ಷದ ಮರೆಯಲ್ಲಿದ್ದರೆ ಅವಳ ಸೌಂದರ್ಯವನ್ನು ನೋಡಬಹುದಲ್ಲವೆ! ಒಳ್ಳೆಯದು ಹಾಗೆ ಮಾಡುವೆನು. (ಎಂದು ವೃಕ್ಷದಮರೆಯಲ್ಲಿರುವನು)

(ಅನಂತರ ಕುಲಪಾಲಿಕಾ, ಕುಸುಮಪ್ರಭೆಯರೆಂಬ ಸಖಿಯರೊಡನೆ ಉತ್ಪಲಕುಮಾರಿಯ ಪ್ರವೇಶ)

ಉತ್ಪಲಕುಮಾರಿ. ಎಲೌ ಸಖಿಯರಾ ನಿಮ್ಮನ್ನು ಬಿಟ್ಟು ನಾನು ಒಂದುಗಳಿಗೆಯಾದರೂ ಇರಲಾರೆ.

ಕುಸುಮಪ್ರಭೆ. ಸಖೀ ಉತ್ಪಲೇ ಹೀಗೆಯೇ ನೀನು ಯಾವಾಗಲೂ ನಮ್ಮನ್ನು ಪ್ರೀತಿಸುತ್ತಿರುವುದಕ್ಕಾದೀತೆ?

ಉತ್ಪಲಕುಮಾರಿ. ಯಾತಕ್ಕಾಗಬಾರದು?

ಕುಸುಮಪ್ರಭೆ. ಇಲ್ಲ. ಇನ್ನು ಮುಂದೆ ಹೀಗೆ ನಡೆಯಲಾರದು.

ಉತ್ಪಲಕುಮಾರಿ. ಎಲೆ ಕುಸುಮಪ್ರಭೆ. ಇದೇಕೆ ಹೀಗೆ ಹೇಳುವೆ. ನಾನು ನಿಮ್ಮನ್ನು ಒಂದುಕ್ಷಣಕಾಲ ಅಗಲಿದ್ದರೂ ನನ್ನ ಮನಸ್ಸು ತಲ್ಲಣಿಸುವುದಲ್ಲ

ಕುಲಪಾಲಿಕೆ. ಸಖೀ. ಈಗ ನೀನು ಯವ್ವನವತಿಯಾಗಿರುವುದರಿಂದ ನಿಮ್ಮ ತಂದೆಯು ನಿನ್ನನ್ನು ಅನುರೂಪನಾದ ವರನಿಗೆ ಕೊಟ್ಟು ಮದುವೆಮಾಡಿದರೆ ಆಗ ನೀನಿರುವುದೆಲ್ಲಿ. ನಾವಿರುವುದೆಲ್ಲಿ.

ವಿಲಾಸಚಂದ್ರ. (ಮರೆಯಲ್ಲಿ) ನನಗೆ ಅಂಥಾಭಾಗ್ಯವು ಲಭಿಸೀತೆ!

ಉತ್ಪಲಕುಮಾರಿ. ಆಗಲೂ ನೀವು ನನ್ನೊಡನೆ ಇರುವುದಕ್ಕಾಗಲಾರದೇ.

ಕುಸುಮಪ್ರಭೆ. ನಿಮ್ಮ ಜನನಿಯಾದ ಸಾರಸಮಾಲಿನಿ ಇದಕ್ಕೆ ಸಮ್ಮತಿಸಲಾರಳು

ಉತ್ಪಲಕುಮಾರಿ. ನಮ್ಮ ಜನನಿಯು ನನ್ನ ಅಭಿಪ್ರಾಯಾನುಸಾರವಾಗಿಯೇ ಎಲ್ಲಾ ಕಾರ್ಯವನ್ನೂ ನಡೆಯಿಸುವಳಲ್ಲವೆ.

ಕುಲಪಾಲಿಕೆ. ಸಖೀ ಉತ್ಪಲೆ, ಹಾಗಾದರೆ ನಿನಗನುರೂಪನಾದ ವರತೆಲ್ಲಿರುವನು.

ವಿಲಾಸಚಂದ್ರ. (ಮರೆಯಲ್ಲಿ) ಎಲೆ ಮನಸ್ಸೇ ಆತುರಪಡಬೇಡ. ನಿನಗಿಷ್ಟವಾದ ವಿಷಯವನ್ನೇ ಕುರಿತು ಇವಳು ಪ್ರಶ್ನೆ ಮಾಡಿರುವಳು.

ಉತ್ಪಲಕುಮಾರಿ. ಸಖಿ. ಈ ಪ್ರಸ್ತಾಪದಿಂದೇನುಪ್ರಯೋಜನ.

ಕುಲಪಾಲಿಕೆ. ಸೌಂದರ್ಯಶಾಲಿನಿಯಾದ ನೀನು ಅರ್ಧಾಂಗಿಯಾಗಬೇಕೆಂದ ಅದೃಷ್ಟವು ಯಾರಿಗಿರುವುದೋ ಅಂಥಾ ಮಹಾತ್ಮನ ಹೆಸರನ್ನು ಕೇಳಿ ತಿಳಿದುಕೊಳ್ಳುವುದೇ ಪ್ರಯೋಜನ.

ಉತ್ಪಲಕುಮಾರಿ. ಸಖೀ. ಕುಲಪಾಲಿಕೆ ದೈವೇಚ್ಛೆಯು ಹೇಗಿರುವುದೋ ಯಾರಿಗೆ ಗೊತ್ತು. (ಎಂದು ನಿಟ್ಟುಸಿರುಬಿಟ್ಟು) ಇದಂತಿರಲಿ ನನ್ನ ವಿಚಕ್ಷಣೆಯೆಂಬ ಶಾರಿಕೆ ಎಲ್ಲಿರುವುದು.

ಕುಲಪಾಲಿಕೆ. ದೇವಿಗೆ ದೇಹಾಲಸ್ಯವಾಗಿದ್ದುದರಿಂದ ತನ್ನ ಮನೋವಿನೋದನಾರ್ಥವಾಗಿ ದ್ಯುತಗಾಮಿನಿಯನ್ನೂ ಶಾರಿಕೆಯನ್ನೂ ದೇವಿಯು ತನ್ನ ಅಂತಃಪುರದಲ್ಲಿಯೇ ಇಟ್ಟುಕೊಂಡಿರುವಳು.

ಉತ್ಪಲಕುಮಾರಿ. ಎಲೆ ಸಖೀ. ಅವೆರಡನ್ನೂ ತೆಗೆದುಕೊಂಡು ಜಾಗ್ರತೆಯಾಗಿಬಾ

ಕುಲಪಾಲಿಕೆ, ಹಾಗೆಯೇ ಆಗಲಿ (ಎಂದು ಹೊರಟುಹೋಗುವಳು)

ವಿಲಾಸಚಂದ್ರ (ಮರೆಯಲ್ಲಿ) ಇವಳ ಮನೋಭಿಪ್ರಾಯವು ಹೇಗಿರುವುದೊ ತಿಳಿಯಲಿಲ್ಲ. ವಿನುಮಾಡಲಿ (ಎಂದು ಯೋಚಿಸುತ್ತಿರುವನು)

ಉತ್ಪಲಕುಮಾರಿ. ಸಖೀ. ಕುಸುಮಪ್ರಭೇ ಈ ನವಮಾಲಿಕಾಲತೆಯು ದಿನೇ ದಿನೇ ಬಾಡಿಹೋಗುತ್ತಿರುವುದಕ್ಕೆ ಕಾರಣವೇನು.

ಕುಸುಮಪ್ರಭೆ. ಈ ನವಮಾಲಿಕಾಲತೆಯು ನಿನ್ನಂತೆಯೇ ಕೋಮಲವಾಗಿ ಬೆಳೆದು ಪುಷ್ಪಿಣಿಯಾಗಿರುವುದರಿಂದ ಪ್ರಶಸ್ತವಾದ ಉಪಘ್ನವೃಕ್ಷದ ಆಶ್ರಯವನ್ನು ಹೊಂದದೇ ಬಾಡಿಹೋಗುತ್ತಿರುವುದು.

ವಿಲಾಸಚಂದ್ರ. (ಮರೆಯಲ್ಲಿ) ಆಃ ಇವಳುಹೇಳಿದಮಾತು ನನ್ನ ಕಿವಿಗೆ ಅಮೃತವನ್ನೆರೆದಂತೆ ಸಂತೋಷವನ್ನುಂಟುಮಾಡಿತು. ಇದಿರಾಗಿಹೋಗಿ ಇವಳ ಮನೋಭಿಪ್ರಾಯವನ್ನು ತಿಳಿದುಕೊಳ್ಳೋಣನೆಂದರೆ ಈ ಸಮಯು

ಬೇರೇ ವಿಘ್ನವಾಗಿರುವಳಲ್ಲಾ.

ಉತ್ಪಲಕುಮಾರಿ. ಸಖೀ. ನೆನ್ನೆಯದಿನ ನೀನು ಹೇಳಿದ ಸ್ವರ್ಣಾಶೋಕ ವೃಕ್ಷಕ್ಕೂ ಇದಕ್ಕೂ ಮದುವೆ ಮಾಡಿದರೆ ಚೆನ್ನಾಗಿರುವುದಲ್ಲವೆ.

ವಿಲಾಸಚಂದ್ರ. ( ಮರೆಯಲ್ಲಿ ) ನನ್ನ ಅಭಿಪ್ರಾಯವೂ ಹಾಗೆಯೇಇರುವುದು.

ಉತ್ಪಲಕುಮಾರಿ. ಸಖೀ. ನಿನ್ನ ಸರಸೋಕ್ತಿಗಳು ಸಾಕು. ಜಿಂಕೆಯನ್ನೂ ಅರಗಿಳಿಯನ್ನೂ ತೆಗೆದುಕೊಂಡು ಬರುವುದಕ್ಕೆಂದು ಹೋದ ಕುಲಪಾಲಿಕೆ ಇನ್ನೂ ಏಕೋಬರಲಿಲ್ಲ. ಆದ್ದರಿಂದ ನೀನೇಹೋಗಿ ಅವುಗಳನ್ನು ಜಾಗ್ರತೆಯಾಗಿ ತೆಗೆದುಕೊಂಡು ಬಾ.

ಕುಸುಮಪ್ರಭೆ. ಹಾಗೆಯೇ ಆಗಲಿ. (ಎಂದು ಹೊರಟು ಹೋಗುವಳು)

ವಿಲಾಸಚಂದ್ರ. (ಮರೆಯಲ್ಲಿ) ಈಗ ನನಗೂ ಅವಕಾಶವು ಸಿಕ್ಕಿತು. ಈಓಲೆಯಲ್ಲಿ ನನ್ನ ಅಭಿಪ್ರಾಯವನ್ನು ಬರೆದು ಇವಳು ಸಂಚರಿಸುತ್ತಿರುವ ಈ ನವಮಾಲಿಕಾ ಲತೆಯ ಬಳಿಯಲ್ಲಿ ಹಾಕುವೆನು. ಅನಂತರ ಏನಾಗುವುದೋ ನೋಡೋಣ. (ಎಂದು ಹಾಗೆಮಾಡುವನು )

ಉತ್ಪಲಕುಮಾರಿ. (ಆಕಸ್ಮಿಕವಾಗಿಬಿದ್ದ ಆ ಓಲೆಯನ್ನು ಕಂಡು) ಇದೇನು ಗಾಳಿಯಿಲ್ಲದೆ ಈಓಲೆಯುಗರಿಯು ಮೇಲಿನಿಂದ ಉದುರಿತು. (ಎಂದದನ್ನು ತೆಗೆದುಕೊಂಡು ನೋಡಿ) ಇದರಲ್ಲೇನೋ ಬರೆಯಲ್ಪಟ್ಟಿರುವುದು. ( ಎಂದಾಶ್ಚರ್ಯದಿಂದ ನೋಡುತ್ತಿರುವಾಗ )

( ಕುಲಪಾಲಿಕಾಕುಸುಮಪ್ರಭೆಯರು ಸಾರಿಗೆಯನ್ನೂ ಜಿಂಕೆಯ ಮರಿಯನ್ನೂ ತೆಗೆದುಕೊಂಡು ಪ್ರವೇಶಿಸುವರು )

ಉತ್ಪಲಕುಮಾರಿ. ( ಜಾಗ್ರತೆಯಾಗಿ ಆಓಲೆಯನ್ನು ಮರೆಮಾಡುವಳು )

ಕುಸುಮಪ್ರಭೆ. ( ಅದನ್ನು ಕಂಡು ) ಸಖೀ. ಅದೇನು.

ಉತ್ಪಲಕುಮಾರಿ. ಎಲ್ಲಿ.

ಕುಲಪಾಲಿಕೆ. ಎಲೆ ಸಖೀ. ಯಾವುದೋಒಂದು ಪತ್ರಿಕೆಯನ್ನು ಹಿಡಿದುಕೊಂಡು ಓದುತ್ತಿದ್ದು ನಮ್ಮನ್ನು ಕಂಡೊಡನೆಯೇ ಮರೆಮಾಡಿದೆ. ನಮ್ಮೊಡನೆಯೂ ತಿಳಿಸದಿರುವಂಥಾ ರಹಸ್ಯವಿರುವುದೇ.

ಉತ್ಪಲಕುಮಾರಿ. ಸಖೀ. ರಹಸ್ಯವೆಂದರೇನು. ಈ ನವಮಾಲಿಕಾಲತೆಯ ಬಳಿಯಲ್ಲಿ ಸಂಚರಿಸುತ್ತಿರುವಾಗ ಇದುಇಲ್ಲಿ ಬಿದ್ದಿತ್ತು.

( ಎಂದು ಕೊಡುವಳು )

ಕುಸುಮಪ್ರಭೆ. ( ಅದನ್ನು ತೆಗೆದುಕೊಂಡು ಓದುವಳು )

ಕಂ|| ಎಲೆನವವಿಕಸಿತ ಕಮಲಿನಿ |
ಜಲದೊಳ್ ಮುಳುಗಿರ್ಪ ನಿನ್ನ ಸೊಬಗಂ ಭ್ರಮರಂ ||
ನಲವಿಂದೀಕ್ಷಿಸಿ ನಿನ್ನೊಳ್ |
ಕೆಳೆಯಂಬಯಸುತ್ತ ವಿಕರ್ಣಮಿದುಸಿ ನಗೊಪ್ಪೇಂ||೧೨

( ಎಂದೋದಿ ) ಸಖೀಇದೇನು.

ಉತ್ಪಲಕುಮಾರಿ. ನಾನುಕಾಣೆ.

ಕುಸುಮಪ್ರಭೆ. ಇದನ್ನು ಬರೆದವರು ಯಾರು.

ಉತ್ಪಲಕುಮಾರಿ. ನೀನೆಷ್ಟುಬಲ್ಲೆಯೋ ನಾನೂ ಅಷ್ಟೇಬಲ್ಲೆನು.

ಕುಸುಮಪ್ರಭೆ. ಒಳ್ಳೇದು ಇದರ ಅಭಿಪ್ರಾಯವೇನು.

ಉತ್ಪಲಕುಮಾರಿ. ಕಮಲಿನಿಯನ್ನುಕುರಿತು ಹೇಳಿದ ಪದ್ಯವಲ್ಲವೆ.

ಕುಸುಮಪ್ರಭೆ. ಕಮಲಿನಿಯನ್ನು ಕುರಿತು, ಎಂದೇಕೆ ಹೇಳುವೆ. ಉತ್ಪಲೆಯನ್ನು ಕುರಿತಲ್ಲವೆ.

ಉತ್ಪಲಕುಮಾರಿ. ನಿನಗೆ ಬುದ್ಧಿಭ್ರಮಣೆ ಯುಂಟಾಗಿರುವಂತೆ ತೋರುವುದು.

ಕುಸುಮಪ್ರಭೆ. ಹೌದು ಈಯೋಲೆಯನ್ನು ಕಂಡಾಗಳಿಂದಲೂ ಹಾಗೆಯೇ ಸರಿ.

ಉತ್ಪಲಕುಮಾರಿ. ಎಲೆಸಖೀ, ಇದೇನು ಸಾಕುಸಾಕು ಸುಮ್ಮನಿರು.

ಕುಸುಮಪ್ರಭೆ. ಅಂತಃಪುರಾವಾಸದಲ್ಲಿರುವ ಯವ್ವನವತಿಯಾದ ಮುಗ್ಧೆಯನ್ನು ಒಬ್ಬನು ಕಂಡು ಮೋಹಿಸಿ ಅವಳಿಗೆ ಈ ಪತ್ರಿಕೆಯನ್ನು ಬರೆದಿರುವನು. ಇದು ನಿನ್ನಬಳಿಯಲ್ಲಿರುವುದರಿಂದ ನೀನೇ ಅವಳಾಗಿರಬಹುದು

ಉತ್ಪಲಕುಮಾರಿ. ( ಕೋಪದಿಂದ ) ಎಲೌಸಖಿಯರಾ, ನಿಮ್ಮ ಪರಿಹಾಸೋಕ್ತಿಗಳು ಮಿತಿಮೀರಿದವು ಇನ್ನುಮೇಲೆ ನೀವು ನನ್ನೊಡನೆ ಮಾತನಾಡಬೇಡಿ (ಎಂದು ಮುಖವನ್ನು ತಿರುಗಿಸಿಕೊಳ್ಳುವಳು)

ಕುಸುಮಪ್ರಭೆ. ಸಖೀ, ನಾವಿಲ್ಲಿದ್ದು ನಿನಗೆ ತೊಂದರೆಯನ್ನುಂಟುಮಾಡುವುದಕ್ಕಿಂತ ಹೊರಟುಹೋಗುವುದೇ ಒಳ್ಳೆಯದಲ್ಲವೆ. (ಎಂದು ಕುಲಪಾಲಿಕೆಯಕಡೆ ತಿರುಗಿ) ಸಖೀ ನಡೆ ನಾವು ಹೋಗೋಣ ( ಎಂದಿಬ್ಬರೂ ಹೊರಟು ಹೋಗುವರು )

ವಿಲಾಸಚಂದ್ರ. (ಮರೆಯಲ್ಲಿ) ಎಲೆಮನಸ್ಸೇ ಇನ್ನು ಸಮಾಧಾನವನ್ನು ಹೊಂದು ನಿನ್ನ ಸುಖಕ್ಕೆ ವಿಘ್ನಕಾರಿಣಿಯರಾಗಿದ್ದ ಆ ಇಬ್ಬರು ಸಖಿಯರೂ

ಹೊರಟು ಹೋದರು

ಉತ್ಪಲಕುಮಾರಿ. ( ತಿರುಗಿನೋಡಿ )ಆಃ ನನ್ನ ಸಖಿಯರು ನಿಶ್ಚಯವಾಗಿಯೂ ಕೋಪಿಸಿಕೊಂಡು ಹೊರಟೇಹೋದರಲ್ಲಾ (ಎಂದುಯೋಚಿಸಿ) ಈ ದ್ರುತಗಾಮಿನಿಯೂ ವಿಚಕ್ಷಣೆಯೂ ಇರುವಾಗ ನನಗೆ ಭಯವೇನು. (ಎಂದು ಜಿಂಕೆಯ ಮರಿಯಕಡೆತಿರುಗಿ) ಎಲೆದ್ರುತಗಾಮಿನೀ ಇದೇಕೆ ಭೀತಳಾಗಿರುವಂತೆ ಕಾಣಿಸುವೆ. ಇಲ್ಲಿ ನಿನಗೆ ಭಯವೇನು.

ವಿಲಾಸಚಂದ್ರ. (ಮರೆಯಲ್ಲಿ) ಕಂ|| ನೀಲಾಳಕೆಮೃಗಶಿಶುವಿದು |
ಲೋಲತೆಯಾಂತಿರ್ಪನಿನ್ನ ಕಣ್ಗಳಸೊಬಗಂ ||
ಆಲೋಕಿಸಿಮತ್ಸರದಿಂ |
ಸೋಲಿಸಲದನೆಳಸಿತಲ್ಲ ದಂಜೆದುದಿಲ್ಲಂ ||೧೩||

ಉತ್ಪಲಕುಮಾರಿ. ಸಖೀ ದ್ರುತಗಾಮಿನೀ. ನೀನು ಹಸಿವಿನಿಂದ ಬಹಳವಾಗಿ ಬಳಲಿರುವಂತೆ ತೋರುವದು. ಈವಳೆಯ ಗರಿಕೆಯನ್ನು ತಿಂದು ನಿನ್ನ ಹಸಿವನ್ನು ಪರಿಹರಿಸಿಕೊ. ಎಂದು ಗರಿಕೆಯನ್ನು ಕೊಯ್ದು ಜಿಂಕೆಯಮರಿಯಮುಂದೆ ಹಾಕಿ ) ನೀನು ವಿಶ್ರಮಿಸಿಕೊಳ್ಳುವ ವರೆಗೂ ನಾನೀವಿಚಕ್ಷಣೆ ಯೊಡನೆ ಮಾತನಾಡುತ್ತಿರುವೆನು. ( ಎಂದು ಗಿಳಿಯಪಂಜರವನ್ನು ತೆಗೆದುಕೊಂಡು ) ಎಲೆ ವಿಚಕ್ಷಣೇ ನಿನಗೆ ನಮ್ಮ ಜನನಿಯ ಅಂತಃಪುರದಲ್ಲಿ ಫಲಾದಿಗಳನ್ನು ಕಾಲಕಾಲಕ್ಕೆ ಸರಿಯಾಗಿ ಕೊಡುತ್ತಿದ್ದರೇ, (ಅದು ಸುಮ್ಮನಿರುವುದನ್ನು ಕಂಡು ) ಇದೇಕೆ ನನಗೆ ಪ್ರತ್ಯುತ್ತರವನ್ನು ಕೊಡದಿರುವೆ.

ವಿಲಾಸಚಂದ್ರ. (ಮರೆಯಲ್ಲಿ) ಕಂ|| ಮದಿರಾಕ್ಷಿಮೆರೆವ ನಿನ್ನಯ |
ಮೃದುವಚನಕೆತನ್ನ ನುಡಿಗಳೆಣೆಬಾರವೆನು ||
ತೊತ್ತದವಿದಲಜ್ಜಾಭರದಿಂ |
ದಿದೊಸಾರಿಗೆಮೌನವೃತ್ತಿಯಂತಳೆದಿರ್ಕುಂ||೧೪||

ಉತ್ಪಲಕುಮಾರಿ. ಸಖೀ ನೀನು ನನ್ನೊಡನೆ ಒಂದು ಮಾತನ್ನಾದರೂ ಆಡಬಾರದೆ ನಾನು ನಿನಗೆ ಯಾವ ಅಪರಾಧವನ್ನು ಮಾಡಿರುವೆನು ನಿನ್ನನ್ನು ಈ ಪಂಜರದಲ್ಲಿಟ್ಟಿರುವುದೇ ನನ್ನ ಅಪರಾಧ ವಾದರೆ ದಯವಿಟ್ಟು ಮನ್ನಿಸು. ಹೊರಗೆಬಾ, ನಾವಿಬ್ಬರೂ ಸ್ವಲ್ಪಕಾಲ ವಿನೋದವಾಗಿ ಮಾತನಾಡೋಣ. ( ಎಂದು ಶಾರಿಕೆಯನ್ನು ಹೊರಕ್ಕೆ ಬಿಡುವಳು)

(ಶಾರಿಕೆಯು ಹಾರಿಹೋಗಿ ಕದಳೀವೃಕ್ಷದಮೇಲೆ ಕುಳಿತುಕೊಳ್ಳುವುದು.)

ಉತ್ಪಲಕುಮಾರಿ (ಖೇದದಿಂದ) ಆಃ ಇನ್ನೇನುಗತಿ. ಎಲೆಸಖಿ ಎಂಥಾ ಅಕಾರ್ಯವನ್ನು ಮಾಡಿದೆ ಕುಸುಮಪ್ರಭಾ ಕುಲಪಾಲಿಕೆಯರಂತೆ ನೀನೂ ನನ್ನನ್ನೊಬ್ಬಳನ್ನೇ ಬಿಟ್ಟು ಹೊರಟು ಹೋಗಬಹುದೇ ಅಯ್ಯೋ ಹತಭಾಗಿನಿಯಾದ ನನ್ನ ದುರದೃಷ್ಟವನ್ನೇನು ಹೇಳಲಿ (ಎಂದು ಬಾಳೆಯಗಿಡದಬಳಿಗೆ ಹೋಗಲು ಅದು ಹಾರಿ ತಮಾಲವೃಕ್ಷದಮೇಲೆ ಕುಳಿತುಕೊಳ್ಳುವುದು.)

ಉತ್ಪಲಕುಮಾರಿ. (ಕೋಪದಿಂದ) ಎಲೆದುಷ್ಟೇ ನಿರ್ಲಕ್ಷ್ಣೇ. ಅವಿಚಕ್ಷಣೇ ಇಲ್ಲಿಂದಲೂ ಹಾರಿಹೋಗಿ ಇನ್ನೂ ಎತ್ತರವಾಗಿರುವ ಆತಮಾಲವೃಕ್ಷದ ಮೇಲೆ ಕುಳಿತುಕೊಂಡೆಯಾ. ನೀನು ಹೀಗೆ ನನ್ನನ್ನು ಆಯಾಸಪಡಿಸುವುದು ಸರಿಯಲ್ಲ. ನಿನ್ನನ್ನು ಅಗಲಿ ನಾನು ಹೇಗೆತಾನೆ ಕಾಲವನ್ನು ಕಳೆಯಲಿ, ಬಾ ನನ್ನೊಡನೆ ಮಾತನಾಡದಿದ್ದರೂ ಚಿಂತೆಯಿಲ್ಲ. ನನ್ನ ಬಳಿಯಲ್ಲಾದರೂ ಇರು. (ಎಂದು ತಮಾಲವೃಕ್ಷದ ಬಳಿಗೆ ಹೋಗಲು ಅದು ಹಾರಿ ರಸಾಲವೃಕ್ಷದ ಮೇಲೆ ಕುಳಿತು ಕೊಳ್ಳುವುದು)

ವಿಲಾಸಚಂದ್ರ. (ಮರೆಯಲ್ಲಿ) ಇವಳಬಳಿಗೆ ಹೋಗುವುದಕ್ಕೆ ಇದೇತಕ್ಕ ಸಮಯ. (ಎಂದುತ್ಪಲೆಯಬಳಿಗೆ ಒಂದು)

ಕಂ|| ಬೀರುವೆ ಬಿಡು ಬಿಡು ಚಿಂತೆಯ |
ನೀರೀತಿಯೊಳೇಕೆನೊಂದು ಕಳೆಗುಂದುವೆನೀಂ ||
ಸಾರುತೆ ನಿಮಿಷದೆ ನಾನಾ |
ಸಾರಿಗೆಯಂ ತಂದು ನಿನ್ನ ಕರತಳಕೀವೆಂ||೧೫

ಎಲೆ ವನಿತಾಮಣಿ, ಭಯಪಡಬೇಡ. ನಿನಗೆ ವ್ಯಾಕುಲವನ್ನುಂಟುಮಾಡಿ ಹಾರಿಹೋಗಿರುವ ಆಶಾರಿಕೆಯನ್ನು ನಾನು ತಂದುಕೊಡುವೆನು. (ಎಂದು ಹೋಗುವನು)

ಉತ್ಪಲಕುಮಾರಿ. (ಆಶ್ಚರ್ಯ ಸಂತೋಷಗಳಿಂದ ಸ್ವಗತಂ) ಇದೇನೀತನು ಯಾರು. ಇಲ್ಲಿಗೆ ಈತನು ಹೇಗೆಬಂದನು. ಈಗ ಈತನಿಗೆ ನನ್ನಲ್ಲಿ ದಯವುಂಟಾಗುವುದಕ್ಕೆ ಕಾರಣವೇನು. (ಎಂದು ಯೋಚಿ

ಸುತ್ತಿರುವಳು )

ವಿಲಾಸಚಂದ್ರ. ( ಗಿಳಿಯನ್ನು ತೆಗೆದುಕೊಂಡು ಪ್ರವೇಶಿಸಿ )ಎಲೆಮುಗ್ಧೇ ಇದೊ ನಿನ್ನವಿಚಕ್ಷಣೆಯನ್ನು ಕರೆತಂದಿರುವೆನು. ( ಎಂದು ಕೊಡುವನು)

ಉತ್ಪಲಕುಮಾರಿ. ( ಅದನ್ನು ತೆಗೆದುಕೊಂಡು ) ಎಲೈಮಹಾತ್ಮನೇ ನಿನ್ನ ಮಹೋಪಕಾರಕ್ಕೆ ಕೃತಜ್ಞಳಾಗಿರುವೆನು. ನೀನು ಯಾರೆಂಬುದನ್ನು ದಯವಿಟ್ಟು ತಿಳಿಸು.

ವಿಲಾಸಚಂದ್ರ ನಾನು ಅಶೋಕನಗರದ ಮಂತ್ರಿಯಾದ ವಿನಯಸೇನನ ಮಗ. ನನ್ನಹೆಸರು ವಿಲಾಸಚಂದ್ರನೆಂದು. ಈಗ ನಾನು ನಿನಗೆಮಾಡಿರುವ ಉಪಕಾರಕ್ಕೆ ಪ್ರತ್ಯುಪಕಾರವನ್ನು ನೀನೇ ಬಲ್ಲೆಯಷ್ಟೆ.

ಉತ್ಪಲಕುಮಾರಿ.ಎಲೈ ಮಹಾತ್ಮನೇ ಅದುಯಾವುದೋ ದಯವಿಟ್ಟು ತಿಳಿಸಿದರೆ ಅಸಾಧ್ಯವಲ್ಲದ'ಪಕ್ಷದಲ್ಲಿ ಆಗಬಹುದು.

ವಿಲಾಸಚಂದ್ರ. ಅದನ್ನು ಈ ನವಮಾಲಿಕಾಲತೆಯುಬಲ್ಲದು.

ಉತ್ಪಲಕುಮಾರಿ. ನವಮಾಲಿಕೆಗೆ ತಿಳಿದರೆ ನನಗೆ ತಿಳಿದಂತಾಯಿತೇ.

ವಿಲಾಸಚಂದ್ರ. ನಿನಗೂ ಗೊತ್ತಿರುವುದು.

ಉತ್ಪಲಕುಮಾರಿ.ಅದುಹೇಗೆ.

ವಿಲಾಸಚಂದ್ರ. ನವಮಾಲಿಕೆಯ ಬಳಿಯಲ್ಲಿದ್ದ ಪತ್ರಿಕೆಯನ್ನು ತೆಗೆದುಕೊಂಡು ನೀನೋದಲಿಲ್ಲವೆ.

ಉತ್ಪಲಕುಮಾರಿ. ( ಲಜ್ಜೆಯಿಂದ ಮಾತನಾಡದೇ ತಲೆಬಾಗಿ ನಿಂತಿರುವಳು.)

ವಿಲಾಸಚಂದ್ರ. ಈಗ ತಿಳಿಯಿತಲ್ಲವೆ. ಇದಕ್ಕೆ ಪ್ರತ್ಯುತ್ತರವೇನು.

ಉತ್ಪಲಕುಮಾರಿ. ಇದಕ್ಕೆ ನಮ್ಮ ಜನನೀಜನಕರು ಒಪ್ಪಬೇಕಲ್ಲವೆ.

ವಿಲಾಸಚಂದ್ರ. ನನ್ನಿಂದ ಉಪಕೃತಳಾದ ನಿನ್ನ ಅನುಮತಿಯನ್ನು ಬಿಟ್ಟು ನಿಮ್ಮ ಜನನೀಜನಕರ ಅನುಮತಿಯನ್ನು ಪಡೆಯಬೇಕೋ.

ಉತ್ಪಲಕುಮಾರಿ. ಅಬಲೆಯರು ಪರಾಧೀನೆಯರಲ್ಲವೆ.

ವಿಲಾಸಚಂದ್ರ. ಅಬಲೆಯರ ಶರೀರವು ಮಾತ್ರಪರಾಧೀನವಾದುದಲ್ಲದೆ ಮನಸ್ಸು ಪರಾಧೀನವಲ್ಲ.

ಉತ್ಪಲಕುಮಾರಿ. ಮನಸ್ಸು ಸ್ವತಂತ್ರವಾಗಿದ್ದರೂ ಶರೀರವು ಪರಾಧೀನ ವಾದ ಪಕ್ಷದಲ್ಲಿ ಮನಸ್ಸಿನಪ್ರಯತ್ನಕ್ಕೆ ನಿಬಂಧ ವುಂಟಾದೀತಲ್ಲವೆ.

ವಿಲಾಸಚಂದ್ರ. ಹಾಗಲ್ಲ, ಮನಸ್ಸುಸ್ವತಂತ್ರವಾಗಿರುವಲ್ಲಿ ಶರೀರವನ್ನು ತನ್ನ ಇಷ್ಟಾ

ನುಸಾರವರ್ತಿಸುವಂತೆ ಮಾಡಬಲ್ಲದು. ಇದೂ ಅಲ್ಲದೆ ನಿನ್ನ ಜನನಿಯು ಎಲ್ಲವನ್ನೂ ನಿನ್ನ ಇಷ್ಟಾನುಸಾರವಾಗಿಯೇ ನಡೆಯಿಸುವಳೆಂಬ ವಿಷಯವನ್ನು ನೀನೇ ನಿನ್ನ ಸಖಿಯರೊಡನೆ ಹೇಳಲಿಲ್ಲವೆ.

ವೈತಾಳಿಕರು. (ತೆರೆಯಲ್ಲಿ)

ವೃ|| ಇದೊಇದೊಭಾಸ್ಕರಂ ಗಗನಮಧ್ಯಮನೇರಿದನಾತಪೋಷ್ಣದಿಂ|
ದಿದೊಇದೊಕಂದಿಕುಂದಿದುವು ತೋರುವಮಲ್ಲಿಗೆಜಾಜಿವಳ್ಳಿಗಳ್||
ಇದೊಇದೊಪಕ್ಷಿಗಳ್ಸರಸಿಯಂಬಳಿಸಾರ್ದುವುನಾಡೆದಾಹದಿಂ ||
ದಿದೊಇದೊಪದ್ಮಿನೀವದನದೊಳ್ನಲಿಗುಂಭ್ರಮರಾಳಿನಲ್ಮೆಯಿಂ|

ಉತ್ಪಲಕುಮಾರಿ. ಆಗಲೇಮಧ್ಯಾಹ್ನವಾಯಿತು. ಇನ್ನುನನ್ನಸಖಿಯರುಬಂದಾರು.

ವಿಲಾಸಚಂದ್ರ. ಎಲೆಭೀರುವೆ ನಿನ್ನಸ್ಮರಣಾರ್ಥವಾಗಿ ನನಗೆ ನಿನ್ನ ಬೆರಲಿನಲ್ಲಿರುವ ಉಂಗುರವನ್ನಾದರೂಕೊಡು.

ಉತ್ಪಲಕುಮಾರಿ. ( ಉಂಗುರವನ್ನುತೆಗೆದು ವಿಲಾಸಚಂದ್ರನಿಗೆ ಕೊಡುವಳು )

ವಿಲಾಸಚಂದ್ರ. ( ಅದನ್ನು ತೆಗೆದು ಕಣ್ಣಿಗೊತ್ತಿಕೊಂಡು )

ಕಂ|| ಚಂದಳಿಗೈಗಳಿನೆಸೆವಾ |
ಸುಂದರಿಯಂಗುಲಿಯೊಳ್ಪದೆ ನೆಲಸಿರ್ದವಳಾ||
ಚಂದದ ರಾಗಮನೊಲವಿಂ|
ಪೊಂದಿದೆ ಯುಂಗುರವೆ ನೀನೆ ಧನ್ಯಂಧನ್ಯಂ||೧೭||

ಉತ್ಪಲಕುಮಾರಿ. ಇದೋ ನನ್ನ ಸಖಿಯರು ಬರುತ್ತಿರುವರು.

ವಿಲಾಸಚಂದ್ರ. ಎಲೆ ಕಾಂತೇ ನಿನ್ನ ಉಂಗುರಕ್ಕೆ ಪ್ರತಿಯಾಗಿ ಇದನ್ನು ಧರಿಸು. ( ಎಂದು ತನ್ನ ಉಂಗುರವನ್ನುಕೊಟ್ಟು ) ಇನ್ನು ನಾನು ಹೋಗುವೆನು ( ಎಂದು ಮರೆಯಲ್ಲಿ ನಿಲ್ಲುವನು )

(ಆಗಕುಲಪಾಲಿಕೆ ಯೊಡನೆ ಕುಸುಮಪ್ರಭೆಯ ಪ್ರವೇಶ )

ಕುಸುಮಪ್ರಭೆ. ಸಖೀ ಉತ್ಪಲೆ, ನಮ್ಮಮೇಲೆನಿನಗೆ ಉಂಟಾಗಿದ್ದ ಕೋಪವು ಇನ್ನೂ ಸಮಾಧಾನವನ್ನು ಹೊಂದಲಿಲ್ಲವೋ.

ವಿಲಾಸಚಂದ್ರ. (ಮರೆಯಲ್ಲಿ) ಆಗ ಅವಳೊಬ್ಬಳೇ ಕೋಪಿಸಿಕೊಂಡಿದ್ದಳು. ಈಗ ನಾನೂ ಸಮಭಾಗಿಯಾಗಿರುವೆನು.

ಉತ್ಪಲಕುಮಾರಿ. ಎಲೌಸಖಿಯರಿರಾ ನಿಮಗೂ ನನಗೂ ಕೋಪವೆಂದರೇನು.

ಕುಲಪಾಲಿಕೆ. ಸಖೀ ಉತ್ಪಲೆ ನಡೆ ಮನೆಗೆ ಹೋಗೋಣ. ಗೌರೀಪೂಜೆಗೆ

ಕಾಲವು ಅತಿಕ್ರಮಿಸುತ್ತಾಬಂತು.

ಉತ್ಪಲಕುಮಾರಿ. ಸಖಿಯರಾ ನಡೆಯಿರಿ ಹೋಗೋಣ. (ಎಂದವರನ್ನು ಕಳುಹಿಸಿ ವಿಲಾಸಚಂದ್ರನಿರುವ ಕಡೆಗೆ ತಿರುಗಿ ನೋಡುತ್ತಾ ನಿಲ್ಲುವಳು)

ಕುಸುಮಪ್ರಭೆ. (ತೆರೆಯಲ್ಲಿ) ಎಲೆ ಸಖೀ, ಇದೇನು ಅಲ್ಲಿಯೇನಿಂತಿರುವೆ.

ಉತ್ಪಲಕುಮಾರಿ. ಈ ಮಾಧವೀಲತೆಯು ನನ್ನ ಕಾಲಿಗೆಸುತ್ತಿಕೊಂಡು ಹೆಜ್ಜೆಯಿಡ ದಂತೆ ಮಾಡಿತು. ಆದ್ದರಿಂದ ನಿಂತೆನಲ್ಲದೆ ಮತ್ತೆಬೇರೆಯಲ್ಲ. ಇದೂ ಬಂದೆ. (ಎಂದು ತಿರುಗಿತಿರುಗಿ ನೋಡುತ್ತ ಹೊರಟುಹೋಗುವಳು)

ವಿಲಾಸಚಂದ್ರ. (ಹೊರಕ್ಕೆ ಬಂದು ಉತ್ಪಲೆಯು ಹೋದಮಾರ್ಗವನ್ನೇ ದೃಷ್ಟಿಸಿ ನಿಟ್ಟುಸಿರುಬಿಟ್ಟು)

ವೃ || ಪರಿಲಸಿತೋನ್ನತಸ್ತನಭರಂ ನಡುವಂಸಡೆಬಳ್ಕಿಸುತ್ತಿರಲ್ ||
ಮೆರೆವನಿತಂಬಮುಂ ಚರಣಪಲ್ಲವಮಂ ಭರದಿಂಬಳಲ್ಚಿರಾ ||
ಸರಸಿಜನೇತ್ರೆ ಮೆಲ್ಲನವಲೋಕಿಸುತೆನ್ನನೆ ಸಾರುತ್ತಲೀ |
ಸ್ಮರಹತಕಂ ನಿಜಾಸ್ತ್ರಕುಲವಂ ತೆಗೆದೆನ್ನೊಳಗೆಚ್ಚನಕ್ಕಟಾ ||೧೮||

ಆಃ ಮಾಧ್ಯಾಹ್ನಿಕಕಾಲವೂ ಅತಿಕ್ರಮಿಸುತ್ತಾ ಬಂತು. ನನ್ನ ಮನಸ್ಸಿನ ಸೈರಣೆಯೂ ಅತಿಕ್ರಮಿಸಿತು. ನನ್ನ ಮನಸ್ಸಿಗೆ ಅತ್ಯಾನಂದ ವನ್ನುಂಟುಮಾಡುತ್ತಿದ್ದ ಆಮುಗ್ಧೆಯದಿವ್ಯಾಕೃತಿಯೂ ನನ್ನ ದೃಷ್ಟಿ ಪಥವನ್ನು ಅತಿಕ್ರಮಿಸಿತು, (ಎಂದು ಮೇಲೆ ನೋಡಿ) ಎಲೈಭಗ ವಂತನಾದ ಭಾಸ್ಕರನೇ. ನಿನಗಿರುವ ಚಂಡಾಂಶುವೆಂಬ ಹೆಸರನ್ನು ನನ್ನಲ್ಲಿಯೇ ಸಾರ್ಥಕಪಡಿಸಿಕೊಳ್ಳಬೇಕೇ. ಆಃ (ಎಂದು ನಿಟ್ಟುಸಿರು ಬಿಟ್ಟು)

ಕಂ || ಇನಿಯಳಪಾಂಗದಬಾಣದೆ|
ತನುವಿದುನೊಂದಿರ್ಪುದಕಟಮೊದಲೊಳ್ಸ್ಮರನುಂ ||
ಮುನಿಯುತೆಕೊಂದಪನೀಗಳ್ |
ದಿನಮಣಿನೀಂಬೇರೆಸುಡುವೆನಾನಿನ್ನೇವೆಂ || ೧೯||

(ಎಂದು ಸುತ್ತಲೂನೋಡಿ)

ಕಂ|| ಧರಣಿಯುನಿದನೆಲ್ಲಮುಮಂ|
ಖರತರಮಾಗಿರ್ಪನಿನ್ನ ಕಿರಣಾಳಿಗಳಿಂ||

ಅರರೇಸುಡುತಿರ್ಪೆದಿನೇ |
ಶ್ವರನಿನ್ನಂಮಿತ್ರನೆಮತಿಕಾಣದರೊರೆವರ್ || ೨೦||
ಈಗನಾನು ಮನೆಗೆಹೋಗಿ ಕಾಲೋಚಿತಕರ್ಮವನ್ನು ನೆರವೇರಿಸಿ ತಿರುಗಿ ಅರಮನೆಯನ್ನು ಕಾಣುವುದಕ್ಕೆ ಪ್ರಯತ್ನಿಸುವೆನು

ಪ್ರಥಮಾಂಕಂ ಸಮಾಪ್ತಂ



## || ದ್ವಿತೀಯಾಂಕಂ ||

———:o:———

( ಅನಂತರ ವಿರಹಾವಸ್ಥೆಯಲ್ಲಿರುವ ವಿಲಾಸಚಂದ್ರನ ಪ್ರವೇಶ.)

ವೃ|| ಬಗೆಯೊಳ್ ಮೂಡಿರೆಲಜ್ಜೆರಾಗದೆಸಕಂಕೈಮೀರೆಚಂದ್ರಾಸ್ಯೆಯಾ
ಮೊಗಮಾದಂಬೆಮರೇರೆನೇತ್ರಯುಗಮುಂಲೋಲತ್ವಮಂತಾಳ್ದಿರಲ್ |
ಮೃಗಶಾಬಾಕ್ಷಿಯಮೇಲುದೊಂದಿನಿಸುಜಾರಲ್ ಪಿಂದಿರುಂಗುತ್ತಿತಾಂ
ಸೊಗಸಿಂನೋಡಿದನೋಟಮೆನ್ನಮನದೊಳ್ ನಾಂಟಿತ್ತದೇವೇಳ್ವೆಪೆಂ||
( ಎಂದು ನಿಟ್ಟಿಸಿರುಬಿಟ್ಟು ) ||೧||

ವೃ|| ನೋಡುವೆನೆಂದೊನಾಂಪ್ರಿಯಳಮುಗ್ಧಮುಖಾಬ್ಜಮನೊಲ್ಮೆಯಿಂದೆಮು | ದ್ದಾಡುವೆನೆಂದೊಕಾಮಿನಿಯನಪ್ಪುತೆಕಾಂಸರಸೋಕ್ತಿಯಾಡುತಂ |ಮೂಡುವುದೆಂದೊನನ್ನಯಪುರಾಕೃತಪುಣ್ಯದಬಳ್ಳಿಬಯ್ಕೆಕೈ | ಗೂಡುವುದೆಂದೊಮನ್ಮಥನಬೇಗೆಯಡಂಗುವದೆಂದೊಕಾಣೆನಾಂ || ೨ ||

ಎಲೈ ನಿಷ್ಕರುಣಿಯಾದಮನ್ಮಥನೆ ! ನೀನು ನನ್ನನ್ನು ಬಾಧಿಸುವುದು ಯುಕ್ತವಲ್ಲ ಕೇಳು;

ಕಂ|| ಎಲೆಮದನ! ಮೆರೆವಶೋಕೋ |
ತ್ಪಲಕಮಲರಸಾಲಮಲ್ಲಿಕಾಂಸ್ತ್ರಗಳನಾ ||
ಲಲನೆನಿಜಾಂಗದೆಬಿಡದಲೆ |
ಗಳಿವಳ್ ನೀನವಳನುಳಿದುಮುಳಿವುದೆನನ್ನೊಳ್ ? ||೩||

ಆಃ ನಿನ್ನಸಾಹಸವು ಅಸಾಧಾರಣವಾದುದೇಸರಿ.

ಕಂ|| ನನೆಸರಲನೆ! ಪಂಕಿಸೆನ್ನೀ|
ಸನಂಗನಾಗಿರ್ದುಮಕಟವಮುಳಿಯುತೆನನ್ನೀ|
ಮನಮಂನೋಯಿಪೆಗಡಮೇ |
ದಿಸಿಯೊಳ್ನೀಂಸಾಂಗನಾಗೆಜಗಮುಳಿವುದೆಪೀ ? ೪

( ಅನಂತರ ಕೌಟಿಲ್ಯಶೇಖರನ ಪ್ರವೇಶ )

ಕೌಟಿಲ್ಯಶೇಖರ. ಅಯ್ಯಾ. ಮಿತ್ರನೇ, ಇದೇನು ! ಬಹಳ ವ್ಯಥೆಪಡುತ್ತಿರುವಂತೆ ಕಾಣಿಸುವೆ ?

ವಿಲಾಸಚಂದ್ರ. ಅಯ್ಯಾ. ಹೇಗೆತಾನೆ ವ್ಯಥೆಪಡದಿರಲಿ !

ಕಂ|| ಸೊಗಸಿಂಗೆತವರ್ಮನೆಮೇಣ್|
ಬಗೆಬಗೆವಿಭ್ರಮಕೆನಾಡೆನೆಲೆಕರಮೆಸೆಪೀ |
ಬಗದೊಳ್ ಸೊಬಗಿನಕಣಿಯೆನೆ |
ನೆಗಳ್ದಕಾಮಿನಿಯನಗಲುತೆಂತಾಂನೈಪಂ||೫||

ಕೌಟಿಲ್ಯಶೇಖರ. ಅಯ್ಯಾ ಇಷ್ಟು ಸ್ವಲ್ಪ ವಿಷಯಕ್ಕೆ ವ್ಯಥೆಪಡಬೇಕೇ ?

ವಿಲಾಚಂದ್ರ. ಅಯ್ಯಾ ? ನಿನಗೆತಿಳಿಯದು. ಕೇಳು ;

ವೃ|| ಪೊಸತೆನಿವಾಸರೋರುಹದನಲ್ಪೊಬಗಂಮೊಗನ್ಮೈದೆಸೋಲಿಸಲ್|
ನಸುನಗೆಜೊನ್ನಮಂ ಪಳಿಯೆಮುಂಗುರುಳೀಳಿಸೆ ಭೃಂಗರಾಜಿಯಂ||
ಕಿಸಲಯಮಂ ಪೊದಳ್ದೆಸೆವ ಚೆಂದುಟಿಸೋಲಿಸೆ ನಾಡೆರಂಜಿಪಾ |
ಅಸಿಯುಳನೊಲ್ದುಕೂಡಿನಲವಿಂನಲಿದಾಡುವನೇಂಕೃತಾರ್ಥನೋ! |೬|

ಕೌಟಿಲ್ಯಶೇಖರ. ಅಯ್ಯಾ, ನೀನು ಕೃತಾರ್ಥನಾಗಿಯೇ ಇರುವೆಯಲ್ಲವೆ ?

ವಿಲಾಸಚಂದ್ರ. ಅದುಹೇಗೆ.

ಕೌಟಿಲ್ಯಶೇಖರ. ಆಮಧುಮತಿಯು ನಿನ್ನ ಇಷ್ಟಾನುಸಾರವಾಗಿಯೇ ನಡೆದುಕೊಳ್ಳುತ್ತಿರುವಳಲ್ಲವೆ?

ವಿಲಾಸಚಂದ್ರ. ಛೀ ಬಿಡು ಮಧುಮತಿಯ ವಿಷಯವನ್ನೇಕೆ ಹೇಳುವೆ ?

ಕಂ|| ನೈಜಸುವಾಸನೆಯಿಂದಂ |
ರಾಜಿಸುತಿರೆಸೊಬಗನರ್ಥವಿಕಸಿತವಾದಾ||
ಜಾಜಿಯಸುಮಮೆಡನುಳಿಯು |
ತ್ರೀಜಗದೊಳಗಾವನೇಸುವಂಕಿಂಶುಕಮಂ||೭||

ಕೌಟಿಲ್ಯಶೇಖರ. ಅಯ್ಯಾ ಹಾಗಾದರೆ ನಿನ್ನ ಮನಸ್ಸನ್ನು ಅಪಹರಿಸುವ ಆ ಕನ್ಯಾ

ಮಣಿಯು ಯಾರು?

ವಿಲಾಸಚಂದ್ರ. ಮಿತ್ರನೇ ಕೇಳು, ನೆನ್ನೆ ಪುಷ್ಕರೋದ್ಯಾನದಲ್ಲಿ ನಾನು ವಿಹರಿಸುತ್ತಿದ್ದಾಗ ಅಲ್ಲಿಗೆ ಮಂತ್ರಿಶ್ರೇಷ್ಠನಾದ ಸಿರ್ಜರಕನ ಮಗಳು ತನ್ನ ಸಖಿಯರೊಡನೆ ವನವಿಹಾರಾರ್ಥವಾಗಿ ಬಂದಿದ್ದಳು. ನಾನಲ್ಲಿಯೇ ತಿಲಕವೃಕ್ಷದ ಹಿಂದೆ ಮರೆಯಾಗಿದ್ದು ಆವಳ ಸೌಂದರ್ಯವನ್ನು ನೋಡಿದೆನು.

ಕೌಟಿಲ್ಯಶೇಖರ. ಆವಳೊಡನೆ ನೀನು ಮಾತನಾಡಲಿಲ್ಲವೋ ?

ವಿಲಾಸಚಂದ್ರ. ಮಾತನಾಡಿದ ಮಾತ್ರದಿಂದ ಫಲವೇನು ?

ಕೌಟಿಲ್ಯಶೇಖರ. ನಿನ್ನನ್ನು ಆಕೆಯು ತಿರಸ್ಕರಿಸಿದಳೇ ?

ವಿಲಾಸಚಂದ್ರ. ಇಲ್ಲ. ತಾನು ಪರಾಧೀನೆಯಾದುದರಿಂದ ಸ್ವತಂತ್ರಳುವುದಿಲ್ಲವೆಂದು ಹೇಳಿದಳು.

ಕೌಟಿಲ್ಯಶೇಖರ. ಹಾಗಾದರೆ ನೀನು ಅವಳತಂದೆಯನ್ನೇ ಪ್ರಾರ್ಥಿಸು..

ವಿಲಾಸಚಂದ್ರ. ( ನಿಟ್ಟುಸಿರುಬಿಟ್ಟು )

ಕಂ|| ಮುಳಿಯುತೆಸಿರಿವೆಣ್ಣಿನ್ನಯ |
ಕೆಳೆಯಂತೊರೆದಿರ್ಪಳಕಟನನ್ನೊಳಲಂಪಿಂ ||
ವಿಲಸದ್ವಾರಿದ್ರ್ಯಾಂಗನೆ |
ನಲೆತಕ್ಕೈಸಿರ್ಪಳಾತನೇಂಲಕ್ಷಿಪನೇ ||೮ ||

ಕೌಟಿಲ್ಯಶೇಖರ. (ಸ್ವಗತ) ಆ ಕನ್ಯಾರತ್ನವನ್ನು ನಾನೇ ಹೇಗಾದರೂ ಹೊಂದುವುದಕ್ಕೆ ಪ್ರಯತ್ನಿಸುವೆನು, (ಎಂದು ಪ್ರಕಾಶಂ) ಅಯ್ಯಾ ! ಸೌಂದರ್ಯಾತಿಶಯದಿಂದ ರಂಭಾದ್ಯಪ್ಸರಸ್ತ್ರೀಯರನ್ನು ಸೋಲಿಸುತ್ತಿರುವ ಆ ಮಧುಮತಿಯು ನಿನಗೆ ವಶಳಾಗಿರುವಲ್ಲಿ ಮಂತ್ರಿಪುತ್ರಿಯನ್ನೇಕೆ ಬಯಸಿ ಹಂಬಲಿಸುತ್ತಿರುವೆ ? ನಡೆ ಮಧುಮತಿಯಮನೆಗೆ ಹೋಗೋಣ.

ವಿಲಾಸಚಂದ್ರ. ಅಯ್ಯಾ ! ನೀನು ಬೇಕಾದರೆ ಅವಳಮನೆಗೆ ಹೋಗು. ನಾನು ಬರುವುದಿಲ್ಲ.

ಕೌಟಿಲ್ಯಶೇಖರ. ಆದರೆ ಈಗೆಲ್ಲಿ ಹೋಗುವೆ ?

ವಿಲಾಸಚಂದ್ರ. ನಾನು ಪುಷ್ಕರೋದ್ಯಾನಕ್ಕೆ ಹೋಗಿ ನನ್ನ ಮನೋವಲ್ಲಭೆಯ ಆಗಮನವನ್ನು ನಿರೀಕ್ಷಿಸುತ್ತಿರುವೆನು.

ಕೌಟಿಲ್ಯಶೇಖರ. ಮಿತ್ರನೇ, ನಿನಗೆ ಬುದ್ಧಿಭ್ರಮಣೆ ಯುಂಟಾಗಿರುವಂತೆ ತೋರುವುದು

ಮಂತ್ರಿಯಮಗಳಾದ ಉತ್ಪಲೆಯೆಲ್ಲಿ! ನೀನೆಲ್ಲಿ! ಸಾಕುಸಾಕು ನಡೆ.

ವಿಲಾಸಚಂದ್ರ. (ಕೋಪದಿಂದ) ಏನು ? ನನಗವಳು ದುರ್ಲಭಳೆನ್ನುವೆಯೋ.

ಕಂ|| ತರುಣೀಕುಲರತ್ನಮನಾ |
ಸರಸೀರುಹವಹ್ನುಗಂಧಮುಖಿಯನಾಂಸೇರದಿರಲ್ ||
ಪರಣಮನುಳಿದಪೆನಲ್ಲದೆ |
ಧರೆಯೊಳಗಿನ್ನ ಕಟ ಬದುರ್ಕಲಾರೆಂಕೆಳೆಯಾ || ೯ ||

ಕೌಟಿಲ್ಯಶೇಖರ. (ಸ್ವಗತ) ಇವನಿಗೆ ಉತ್ಪಲೆಯಲ್ಲಿ ಅನುರಾಗವು ಚೆನ್ನಾಗಿ ನಟ್ಟಿರುವುದು. ಇನ್ನಿವನು ಮಧುಮತಿಯನ್ನು ಲಕ್ಷಿಸುವುದಿಲ್ಲ. ಈಗ ನಾನೇನುಮಾಡಲಿ. ನನ್ನ ಯೋಚನೆಗಳೆಲ್ಲಾ ವಿಫಲವಾಗುವಂತೆ ತೋರುವುದಲ್ಲಾ. ಇದಂತಿರಲಿ, ಇವನಮನಸ್ಸನ್ನು ಅಪಹರಿಸಿರುವ ಆಕನ್ಯಾರತ್ನವು ಎಷ್ಟು ಸುಂದರಿಯಾಗಿರಬಹುದು! ನಾನು ಪ್ರಯತ್ನಿಸಿದರೆ ಅವಳನ್ನು ಹೊಂದಬಹುದಲ್ಲವೆ. ಒಳ್ಳೇದು. (ಎಂದು ಪ್ರಕಾಶಂ) ಮಿತ್ರನೇ! ನಿನ್ನ ಮನಸ್ಸನ್ನು ಪರೀಕ್ಷಿಸಬೇಕೆಂದು ಹಾಗೆ ಹೇಳಿದೆನಲ್ಲದೆ ಮತ್ತೆ ಬೇರೆಯಲ್ಲ. ಶೂರನಾದ ನಾನಿರುವಾಗ ನೀನೇ ಅಲ್ಪವಿಷಯಕ್ಕೋಸ್ಕರ ಚಿಂತಿಸಬೇಕೆ! ಈಗ ನೀನು ಮನೆಗೆ ನಡೆ. ನಾನು ಮಧುಮತಿಯ ಬಳಿಗೆ ಹೋಗಿ ಅವಳಿಗೆ ನೀನುಕೊಟ್ಟಿರುವ ಚಂದ್ರಹಾರವನ್ನು ತೆಗೆದುಕೊಂಡು ಬರುವೆನು. ಅನಂತರ ನಾವಿಬ್ಬರೂ ಪುಷ್ಕರೋದ್ಯಾನಕ್ಕೆ ಹೊರಡೋಣ. ನಿನ್ನ ಅನುರಾಗಪ್ರದರ್ಶನಾರ್ಥವಾಗಿ ಅದನ್ನು ನಿನ್ನ ಪ್ರಾಣಕಾಂತೆಗೆ ಸಮರ್ಪಿಸಿದರೆ ಅವಳಿಗೆ ನಿನ್ನಲ್ಲಿ ಈಗಿರುವುದಕ್ಕಿಂತಲೂ ಅಧಿಕವಾದ ಪ್ರೀತಿ ಯುಂಟಾದೀತು.

ವಿಲಾಸಚಂದ್ರ. ಅಯ್ಯಾ, ನೀನುಹೇಳಿದ್ದು ನಿಶ್ಚಯ. ಈಗಹೋಗಿ ಆಚಂದ್ರಹಾರವನ್ನು ಜಾಗ್ರತೆಯಾಗಿತೆಗೆದುಕೊಂಡು ಬಾ.

ಕೌಟಿಲ್ಯಶೇಖರ. (ಸ್ವಗತ) ಆಃ ನನ್ನ ತಂತ್ರವು ಸಫಲವಾಯಿತು. (ಎಂದುಪ್ರಕಾಶಂ) ಅದುವರೆಗೂ ನೀನು ಮನೆಯಲ್ಲಿಯೇ ಇರು. ನಾನು ಜಾಗ್ರತೆಯಾಗಿ ಬರುವೆನು. ಆ ದುಷ್ಟನಾದ ಅಮರದತ್ತನು ನಿನಗೆ ಕೇಡನ್ನುಂಟುಮಾಡಬೇಕೆಂದು ಸಮಯವನ್ನು ನಿರೀಕ್ಷಿಸುತ್ತಿರುವನು,

ಏಕಾಂಗಿಯಾಗಿ ನೀನು ಸಂಚರಿಸಬೇಡ. ಜಾಗರೂಕನಾಗಿರು.

ವಿಲಾಸಚಂದ್ರ. ಹಾಗೆಯೇ ಆಗಲಿ ನೀನುನಡೆ.

( ಕೌಟಿಲ್ಯಶೇಖರನು ಹೊರಟುಹೋಗುವನು )

ವಿಲಾಸಚಂದ್ರ. ಆಃ ಎಲ್ಲೆಲ್ಲಿಯೂ ಆಕನ್ಯಾಮಣಿಯೇ ಕಾಣಿಸುತ್ತಿರುವಳಲ್ಲ

ವೃ|| ಎನ್ನಯಚಿತ್ತದಲ್ಲಿನೆಲಸಿರ್ದಪಳಾಸತಿ ಸನ್ನನೇತ್ರದೊಳ್. ||
ಚೆನ್ನೆನೆಬೀಡುಗೊಂಡುಮೆರೆದಿರ್ದಪುದಾಕೆಯ ಮುಗ್ಧಹಾಸಮುಂ |
ಎನ್ನಯಕರ್ಣಯುಗ್ಮದೊಳಗಾಕೆಯ ನಲ್ನುಡಿಗಳ್ವಿರಾಜಿಕುಂ |
ಕನ್ನೆಯದಾವಮಂತ್ರಬಲದಿಂಬಿಡದೀಪರಿಗೈದಳೊಸನ್ನನಕ್ಕಟಾ||೧೮||

ಒಳ್ಳೇದು. ಈಗ ನಾನುಹೋಗಿ ನನ್ನ ಮಿತ್ರನಾದ ಕೌಟಿಲ್ಯಶೇಖರನ ಆಗಮನವನ್ನೇ ನಿರೀಕ್ಷಿಸಿಕೊಂಡಿದ್ದು ಅವನು ಬಂದನಂತರ ಪುಷ್ಕರೋದ್ಯಾನಕ್ಕೆ ಹೊರಡುವೆನು. ( ಎಂದು ಹೊರಟು ಹೋಗುವನು. )

( ಅನಂತರ ಕೌಟಿಲ್ಯಶೇಖರನು ಅನರ್ಘ್ಯವಾದ ವಸ್ತ್ರಾಭರಣಗಳನ್ನು ಧರಿಸಿಕೊಂಡು ಪ್ರವೇಶಿಸುವನು. )

ಕೌಟಿಲ್ಯಶೇಖರ. ಮಧುಮತಿಯಮನೆಯಿಂದ ಚಂದ್ರಹಾರವನ್ನು ತಂದು ಕೊಡುವೆನೆಂದು ಹೇಳಿ ಆ ವಿಲಾಸಚಂದ್ರನು ಮನೆಯಲ್ಲಿ ಕಾದುಕೊಂಡಿರುವಂತೆ ಮಾಡಿ ಇಲ್ಲಿಗೆ ಬಂದಿರುವೆನು. ಈಗ ಆ ಮಂತ್ರಿಪುತ್ರಿಯಾದ ಉತ್ಪಲಕುಮಾರಿಯು ಇಲ್ಲಿಗೆ ಎಷ್ಟುಹೊತ್ತಿಗೆ ಬರುವಳೋ ತಿಳಿಯದು, ನನ್ನನ್ನು ಕಂಡರೆ ಅವಳಿಗೆ ಆವಿಲಾಸಚಂದ್ರನಲ್ಲಿ ಅನುರಾಗವು ಖಂಡಿತವಾಗಿಯೂ ತಪ್ಪುವುದು. ಇದರಲ್ಲಿಸಂದೇಹವೇಕೆ?

ಕಂ|| ರಸೆಯೊಳ್ಚದುರೆಯರಾರೆನೋ |
ಪೆಸುವರೆನಲ್ವಿಷಯ ವಿಮುಖಿ ಮುಗ್ಧೆಯೆನಿಪ್ಪಾ||
ಬಿಸಜಾಕ್ಷಿ ತೊಳಗುವೆನ್ನಯ |
ಪೊಸಸೊಬಗಂಕಂಡದೆಂತುಮೋಹಿಸದಿರ್ಕುಂ ||೧೯||

ಅನಂತರ ನನ್ನ ಸೌಖ್ಯಕ್ಕೆ ನ್ಯೂನತೆಯೇ ಇರಲಾರದು. ಹೇಗೆಂದರೆ

ಕಂ|| ಬೆಲೆವೆಣ್ಗಳಬೀದಿಯೊಳುರೆ |
ನಲಿನಲಿಯುತೆಬೆರೆತುಬೀಗುವಾಮಧುಮತಿಯುಂ ||
ಅಲೆಗಳೆದುತ್ಪಲೆಯೊಡನಿಂ |
ನಿಳೆಯೊಳ್ಮೆಯ್ವಡೆದಮಾರನಂತಿರೆಮೆರೆವೆಂ || ೨೦ ||

ಇದೇನು! ಆಉತ್ಪಲೆಯು ಇನ್ನೂ ಬರಲಿಲ್ಲ. ತನ್ನ ಸಖಿಯರೊಡನೆ ಮಾತನಾಡುತ್ತಾ ಮೆಲ್ಲನೆ ಬರುತ್ತಿರುವಳೋ ಏನೋ. ಒಳ್ಳೇದು. ಅವಳು ಬರುವ ಮಾರ್ಗವನ್ನೇ ನೋಡುತ್ತಾ ಇಲ್ಲಿರುವೆನು.(ಎಂದು ನಿಂತುನೋಡಿ) ಆಃ. ಈ ವಿಲಾಸಚಂದ್ರನನ್ನು ಮನೆಯಲ್ಲಿರುವಂತೆ ಹೇಳಿ ನಾನಿಲ್ಲಿಗೆ ಬಂದೆನು. ಇವನು ನನ್ನ ಮಾತನ್ನು ಲಕ್ಷಿಸದೇ ಇಲ್ಲಿಗೇ ಬಂದನಲ್ಲಾ. . ಇಗ ಇವನು ನನ್ನನ್ನು ಕಂಡರೆ ನಾನು ಮಿಥ್ಯಾವಾದಿಯೆಂದು ವ್ಯಕ್ತವಾಗುವುದಲ್ಲದೆ, ದುರಭಿಪ್ರಾಯದಿಂದಲೇ ಇಲ್ಲಿಗೆ ಬಂದಿರುವೆನೆಂದೂ ಗೊತ್ತಾಗುವುದರಲ್ಲಿ ಸಂದೇಹವೇಇಲ್ಲ. ಈಗೇನುಮಾಡಲಿ ಇಲ್ಲಿಂದ ಹೊರಟು ಹೋಗಲೇ. (ಎಂದು ಯೋಚಿಸಿ). ಅಯ್ಯೋ ? ಉತ್ಪಲೆಯ ಸೌಂದರ್ಯವನ್ನು ಕಿವಿಯಿಂದ ಕೇಳಿ ನನ್ನ ಮನಸ್ಸೆಲ್ಲಾ ಅವಳಲ್ಲಿಯೇ ನೆಲೆಗೊಂಡಿರುವುದರಿಂದ ಹೇಗೆತಾನೆ ಹೊರಟುಹೋಗುವುದಕ್ಕಾದೀತು. ಕಾ:ಣಾಂತರವನ್ನು ಕಲ್ಪಿಸಿ ಹೇಳಿ ಇವನಿಗೆ ಕಾಣಿಸಿಕೊಳ್ಳುವೆನೆಂದರೆ, ಆ ಮಂತ್ರಿಪುತ್ರಿಯು ನಮ್ಮಿಬ್ಬರನ್ನೂ ಏಕಕಾಲದಲ್ಲಿ ನೋಡುವುದರಿಂದ ನನ್ನ ಮನೋರಥವು ಸಫಲವಾಗಲಾರದು ಹೇಗೆಂದರೆ ಅವಳು ಈ ವಿಲಾಸಚಂದ್ರನನ್ನು ಮೊದಲೇ ಕಂಡು ಅನುರಕ್ತಳಾಗಿರುವುದರಿಂದ ಅವಳಿಗೆ ನನ್ನಲ್ಲಿ ಅನುರಾಗವುಂಟಾಗುವುದಿಲ್ಲ. ಈಗೇನುಮಾಡಲಿ.

(ಎಂದು ಯೋಚಿಸುತ್ತಿರುವನು)

(ಅನಂತರ ವಿರಹಾವಸ್ಥೆಯಲ್ಲಿರುವ ವಿಲಾಸಚಂದ್ರನ ಪ್ರವೇಶ)

ವಿಲಾಸಚಂದ್ರ. (ನಿಟ್ಟುಸಿರು ಬಿಟ್ಟು) ಎಲೈ ಕ್ರೂರನಾದ ಮನ್ಮಥನೇ! ನನ್ನನ್ನು ವ್ಯರ್ಥವಾಗಿ ನೋಯಿಸುತ್ತಿರುವೆ. ನನ್ನಲ್ಲಿ ನಿನ್ನ ಸಾಹಸವು ಫಲಕಾರಿಯಾಗಲಾರದು

ಕಂ|| ಸಡಗರದೆನನ್ನ ಕಿವಿಯಿಂ |
ಮಡದಿಯ ಸವಿವಾತಿನಮೃತಮೀಂಟಿರ್ಪುದರಿಂ ||
ಸುಡುತಿರ್ಪ ನಿನ್ನ ಬಾಣಕೆ |
ಮಿಡುಕದು ಮತ್ಪ್ರಾಣಮೆಲೆಮನೋಭವ! ಬಿಡುನೀಂ || ೧೩ ||

ಚಂದ್ರಹಾರವನ್ನು ತರುವೆನೆಂದು ಹೇಳಿಹೋದ ನನ್ನ ಮಿತ್ರನಾದ ಕೌಟಿಲ್ಯಶೇಖರನು ಎಷ್ಟುಹೊತ್ತಾದರೂ ಬರಲೇಇಲ್ಲವಲ್ಲ. ಅದುದು

ದ್ಯುತಿಯನ್ನು ಕಂಡು ಮುಗ್ಧನಾಗಿ ಅಲ್ಲಿಯೇ ಇರಬಹುದು. ಹಾಗೆಯೇಸರಿ. ಏಕೆಂದರೆ!

ವೃ|| ಕೊರೆಯಿಸುಗುಂಗಡಾತನುವಿನಾಸೆಯನೋಡಿ ಭ್ರದಾಂಧನಾಸೆಯಂ|
ಮರೆಯಿಸುಗುಂನಿಜಾಪ್ತಕುಲಮಂಕಡೆಗಣ್ಚಿ ಪುದಲ್ತೆದೈವಮಂ ||
ಪುರಃಶರಬುದ್ಧಿಯಂನಿಮಿಷದೊಳ್ ಮರುಳಾಗಿಸಿಕಾಕನುರುಳ್ಚುಗುಂ
ತರುಣಿಯರೊಲ್ಮೆಯೇನೆಸಗದಪ್ಪುದೊಭ್ರಮಿಸಲೀಧರಿತ್ರಿಯೊಳ್ ||

ಕೌಟಿಲ್ಯಶೇಖರ.( ಮರೆಯಲ್ಲಿ ) ಈಗ ನಾನಿವನರಿಯದಂತೆ ಹಿಂದಣಿಂದ ಹೋಗಿ ಹೊಡೆದು ಇವನನ್ನು ನೆಲಕ್ಕೆ ಕೆಡವಿ ಇವನ ಕಣ್ಣನ್ನೂ ಬಾಯನ್ನೂ ಬಟ್ಟೆಯಿಂದ ಭದ್ರವಾಗಿ ಬಿಗಿದು ಕಟ್ಟಿ ಕೈಕಾಲಾಡಿಸದಂತೆ ಬಂಧಿಸಿ ಈವೃಕ್ಷದ ಮರೆಯಲ್ಲಿ ಮಲಗಿಸುವೆನು. ಇದೇ ಒಳ್ಳೇದು.

ವಿಲಾಸಚಂದ್ರ.( ಎಡಗಣ್ಣು ಚಲಿಸಿದಂತೆ ಅಭಿನಯಿಸಿ ) ಆ! ಇದೇನು ದುಶ್ಶಕುನಗಳುಂಟಾಗುತ್ತಿರುವವು.

ಕಂ|| ಮನದೊಳಗಾನೊಂದೆಣಿಸುತೆ |
ವನಕೈತರೆಕಾನನದೊಂದನೆಣಿಸುತಮೆಡಗಣ್ ||
ಅನಿಮಿತ್ತಮಾಗಿಚಲಿಸುತ |
ಮನಿಷ್ಟಮಂಸೂಚಿಸುತ್ತಮಿರ್ದಪುದಕಟಾ || ೧೫ ||

ಕೌಟಿಲ್ಯಶೇಖರ.( ಹಿಂದಣಿಂದಬಂದು ವಿಲಾಸಚಂದ್ರನನ್ನು ಖಡ್ಗದಿಂದ ತಿವಿಯಲು ವಿಲಾಸಚಂದ್ರನು ಮೂರ್ಛಾಕ್ರಾಂತನಾಗಿ ಬೀಳುವನು )

ಕೌಟಿಲ್ಯಶೇಖರ.( ತನ್ನ ಬಳಿಯಲ್ಲಿದ್ದ ವಸ್ತ್ರದಿಂದ ವಿಲಾಸಚಂದ್ರನ ಕಣ್ಣನ್ನೂ ಬಾಯನ್ನೂ ಭದ್ರವಾಗಿ ಬಂಧಿಸಿ ) ಆ! ಆನಂದರಾಯ ಸಮಾಗಮಕ್ಕೆ ಮುಖ್ಯವಾದ ಪ್ರಥಮವಿಘ್ನವು ನಿವಾರಣೆಯಾದಂತೆಯೇ ಸರಿ. ಇವನನ್ನು ಹೇಗೆ ಮರೆಮಾಡಲಿ ( ಎಂದು ಯೋಚಿಸಿ ) ಒಳ್ಳೇದು ಇಲ್ಲಿಬಿದ್ದಿರುವ ಈ ಬಳ್ಳಿಯಿಂದ ಇವನ ಕೈಕಾಲುಗಳನ್ನು ಕಟ್ಟಿ ಇವನ ಮೇಲೆ ಈ ಎಲೆಗಳನ್ನು ಹಾಕಿ ಮರೆಮಾಡುವೆನು ( ಎಂದು ಹಾಗೆಮಾಡುವನು )

( ಅನಂತರ ಕಂಚುಕಿಯ ಪ್ರವೇಶ )

ಕಂಚುಕಿ. ಕಂ|| ಕರದಂಬೆಳದಂನಯನಮು |
ದರಿಯದುಕಿವಿಕೇಳಲಾರದಿತರರ ನುಡಿಯಂ ||

ಒರೆದುದನಾಗಳೆಮರೆವೆಂ |
ಜರೆಯಾಲಿಂಗನದಸುಖದೆವೈಮರೆದಿರ್ಪೆಂ || ೧೬ ||

ಕೌಟಿಲ್ಯಶೇಖರ. ( ಕಂಚುಕಿಯನ್ನು ಕಂಡು ) ಆಃ ಈ ತೊತ್ತಿನ ಮಗನೊಬ್ಬನು ನನ್ನ ಪ್ರಯತ್ನಕ್ಕೆ ವಿಘ್ನವಾಗಿ ಬಂದನಲ್ಲಾ. ಇವನು ಆ ಉತ್ಪಲೆಯ ಸಂಗಡ ಬಂದಿರುವ ಸೇವಕನಾಗಿರಬಹುದೇ ಬಳ್ಳೇದಿರಲಿ. ಮರೆಯಲ್ಲಿ ನಿಂತು ನೋಡುವೆನು ( ಎಂದು ಮರೆಯಲ್ಲಿರುವನು )

ಕಂಚುಕಿ. ಈ ವಾರ್ಧಿಕ್ಯದಶೆಯಲ್ಲಿ ಪರಸೇವಾವೃತ್ತಿಯು ಬಹುಕಷ್ಟಕರವಾದದ್ದು. ಅದರಲ್ಲಿಯೂ ರಾಜವಾಸದಲ್ಲಿ ಸೇವೆಮಾಡುವುದು ಇನ್ನೂ ಕಷ್ಟಕರವಾದದ್ದು. ಯುವಕರಿಗೆ ಕಷ್ಟಕರವಾಗಿರುವ ಈವೃತ್ತಿಯು ನನ್ನಂಥಾವೃದ್ಧನಿಗೆ ಸುಲಭಸಾಧ್ಯವೆ. ಅಯ್ಯೋ ಜನ್ಮಾರಭ್ಯ ಈ ರಾಜವಾಸದಲ್ಲಿಯೇ ಸೇವೆಮಾಡುತಾ ಯಥಾರ್ಥವಾದಿಯಾಗಿ ಸ್ವಾಮಿಯ ಆಜ್ಞಾನುಸಾರ ಸ್ವಲ್ಪವೂತಪ್ಪದೆ ನಡೆದುಕೊಳ್ಳುತ್ತಿದ್ದರೂ ವೃದ್ಧನೆಂದೂ ಅಪ್ರಯೋಜಕನೆಂದೂ, ನನ್ನನ್ನು ಅನ್ಯಾಯವಾಗಿ ಮೇಲ್ಪಟ್ಟವರೆಲ್ಲಾ ನಿಂದಿಸುವರಲ್ಲಾ. ಈ ನಿಂದನೆಯನ್ನೂ ಅಪಮಾನವನ್ನೂ ಸೈರಿಸಿಕೊಂಡಿದ್ದರೂ ಹಾಳಾದ ಆಸೆಯು ಮಾತ್ರ ಪೂರ್ತಿಯಾಗಲಿಲ್ಲ. ಆಃ ಎಲೈ ದುರಾಶೆಯೇ ! ನಿನ್ನ ಮಹಿಮೆಯನ್ನು ಎಷ್ಟುಹೇಳಿದರೂ ಸಾಲದು ಎಲೈ ಹಾಳಾದ ಆಶೆಯೇ ! ನೀನು ಸತ್ಯವಂತನನ್ನು ಮಿಥ್ಯಾವಾದಿಯಾಗಿ ಮಾಡುವೆ. ಕೋಮಲ ಹೃದಯಳಾದ ಸ್ತ್ರೀಯನ್ನು ಕಠಿನ ಮನಸ್ಕಳನ್ನಾಗಿ ಮಾಡುವೆ. ಮಿತ್ರನನ್ನು ಶತ್ರುವನ್ನಾಗಿ ಮಾಡುವೆ. ಪಾಪಪುಣ್ಯ ವಿವೇಚನೆಯನ್ನೇ ತಪ್ಪಿಸುವೆ. ಯುಕ್ತಾಯುಕ್ತ ಪರಿಜ್ಞಾನವನ್ನು ಹಾಳುಮಾಡುವೆ. ಅಮೋಘವಾದ ದೈವಭಕ್ತಿಯನ್ನು ನಿರ್ಮೂಲಮಾಡುವೆ, ನಿನ್ನಮಹಿಮೆಯಿಂದಲೇ ಅಲ್ಲವೆ ಕೌರವಾದಿಗಳೆಲ್ಲರೂ ಭಸ್ಮೀಭೂತರಾದದ್ದು ! ನಿನ್ನ ಮಹಿಮೆಯಿಂದಲೇ ಅಲ್ಲವೆ ಈ ಲೋಕವೆಲ್ಲವೂ ಸಕಲವಿಧವಾದ ಸಂಕಟಕ್ಕೊಳಗಾಗಿರುವುದು ! ಈ ರಾಜವಾಸದಲ್ಲಿ ನಾನು ಸ್ವಭಾವ ಚಪಲರಾದ ಬಾಲಕರೊಡನೆ ಆಡುತಾ ಧೂರ್ತೆಯರಾದ ಚೇಟಿಯರು ದೇವಿಯ ಆಜ್ಞೆಯೆಂದು ನನ್ನನ್ನು ಎಷ್ಟುವೇಳೆ ಇಲ್ಲಿಂದಲ್ಲಿಗೆ ತಿರುಗಿಸಿದ

ರೂ ತಿರುಗುತ್ತ ಮುದಿಕಪಿಯಹಾಗೆ ಕುಣಿಯುತ್ತಿರುವುದೂ ನಿನ್ನ ಮಹಿಮೆಯಿಂದಲೇ ಅಲ್ಲವೆ. ನಿನ್ನನ್ನು ಯಾವನು ಜಯಿಸುವನೋ ಅವನು ಸಾರ್ವಭೌಮನಲ್ಲದ ಭೂಮಂಡಲವನ್ನು ಜಯಿಸಿದವನೆಂದಿಗೂ ಸಾರ್ವಭೌಮನಲ್ಲ. ( ಎಂದು ತಿರುಗಿ ) ನಮ್ಮ ರಾಜಕುಮಾರನಾದ ಧೀರವರ್ಮನಲ್ಲಿ ಹೋದನು! ( ಎಂದು ಭಯದಿಂದ ) ಅಯ್ಯೋ ! ಆ ದುಷ್ಟನಾದ ಅನಂಗಸೇನನೂ ಮಂತ್ರಿಪುತ್ರನಾದ ನಿಪುಣಕನೂ ಅವನನ್ನು ಸರೋವರದ ಒಳಗೆ ಆಡುವುದಕ್ಕೆ ಕರೆದುಕೊಂಡು ಹೋಗಿರುವರಲ್ಲ (ಎಂದು ಸ್ವಲ್ಪದೂರ ಹೋಗಿ) ಎಲೈ ! ಆಯುಷ್ಮಂತರಾ ! ಅತ್ತ ಕಡೆ ಹೋಗಬೇಡಿ. ಹೀಗೆ ಬನ್ನಿ ಹೀಗೆ ಬನ್ನಿ.

(ಅನಂತರ ರಾಜಕುಮಾರನಾದ ಧೀರವರ್ಮನು ತನ್ನ ಒಡನಾಡಿಗಳೊಡನೆ ಪ್ರವೇಶಿಸುವನು)

ಅನಂಗಸೇನ. ಎಲೋ ವೃದ್ಧನೇ ಇದೇಕೆ ವರ್ಷಾಕಾಲದ ಕಪ್ಪೆಯಹಾಗೆ ಹೀಗೆ ಅರಚುವೆ !

ಕಂಚುಕಿ. ಎಲೈ. ಆಯುಷ್ಮಂತನೆ ಬಂಕೆಯ ಒಳಿಯಲ್ಲಿಯೂ ಜಲಾಶಯದ ಸಮೀಪದಲ್ಲಿಯೂ ಹಸುಗಳ ಮಧ್ಯದಲ್ಲಿಯೂ ಬಾಲಕರು ಯಾವಾಗಲೂ ಆಡಬಾರದು.

ನಿಪುಣಕ. ಆಡಿದರೆ ಭಯವೇನು ! ಕೈಕಾಲುಗಳಲ್ಲಿ ತ್ರಾಣವಿಲ್ಲದೆ ಸ್ವಲ್ಪಗಟ್ಟಿಯಾಗಿ ಗಾಳಿಬೀಸಿದರೂ ತರಗೆಲೆಯಂತೆ ಹಾರಿಹೋಗುವ ನಿನ್ನ ಹಾಗೆ ನಾವೂ ಮುದುಕರೆಂದು ಭಾವಿಸಿರುವೆಯೋ !

ಕಂಚುಕಿ. ( ಸ್ವಗತ ) ಈ ಧೂರ್ತರು ನನ್ನ ಮಾತನ್ನು ಲಕ್ಷಿಸತಕ್ಕವರಲ್ಲ ( ಎಂದು ಪ್ರಕಾಶ ) ಅಯ್ಯಾ ! ನೀವು ಶಕ್ತವಂತರೇಸರಿ ಆದರೆ ಒಂದು ದೊಡ್ಡ ಸರ್ಪವಿರುವುದು. ಆದ್ದರಿಂದ ಅಲ್ಲಿಮಾತ್ರ ಆಡಬೇಡಿ

ಅನಂಗಸೇನ. ಏನು ! ಅಲ್ಲಿ ಒಂದು ದೊಡ್ಡ ಸರ್ಪವಿರುವುದೇ! ಇದ್ದರೇನು ಇರಲಿ

ಕಂ|| ಪಿಡಿಯುತೆ ಕಡ್ಡೂಳ ಖಡ್ಗವ |
ನಡಿಗಡಿಗಂ ಕಚ್ಚುತೋಷ್ಠಮಂ ರಿಪುನೃಪರಂ ||
ಕಡಿಕಡಿದು ಮಲಂಗಿಸುವೆಂ |
ಬಿಡುಬಡಪಾವಿಂಗೆ ಧೀರನಾನಂಜುವೆನೇಂ? || ೧೭ ||

ಧೀರವರ್ಮ. ( ಲತೆಗಳಲ್ಲಿರುವ ಪುಷ್ಪಗಳನ್ನು ಕಿತ್ತುಚೆಲ್ಲುತ್ತಾ ಕೌಟಿಲ್ಯಶೇಖರ ನಿರುವ ವೃಕ್ಷದಬಳಿಗೆ ಬರುವನು.)

ಕೌಟಿಲ್ಯಶೇಖರ. ( ಸ್ವಗತಂ ) ಆಃ ಈ ಬಾಲಕನು ಧರಿಸಿರುವ ಆಭರಣಗಳು ಬಹಳ ಬೆಲೆಯುಳ್ಳವುಗಳಾಗಿದೆ. ಇಂಥಾ ಆಭರಣಗಳನ್ನು ನಮ್ಮ ಮಧು ಮತಿಯು ಧರಿಸಿಕೊಂಡರೆ ಆ ಉತ್ಪಲೆಗಿಂತಲೂ ಸುಂದರಿಯಾಗಿ ಟೀ ಕಾಣಿಸಿಕೊಳ್ಳುವಳಲ್ಲವೆ.

ಕಂಚುಕಿ. ( ಸ್ವಗತ.) ಇವನು ತನ್ನ ಛಲವನ್ನು ಬಿಡುವುದಿಲ್ಲ. ಈಗ ಇವನಿಗೆ ಆ ವಿಷಯವೇ ಮರೆತುಹೋಗುವಂತೆ ಮಾಡಬೇಕಲ್ಲದೆ ಇನ್ನೇನು ಹೇಳಿದರೂ ಇವನು ಲಕ್ಷಿಸುವುದಿಲ್ಲ. ಒಳ್ಳೇದು. ( ಎಂದು ಪ್ರಕಾಶಂ.) ಅಯ್ಯಾ! ನೀನು ಅಂಥಾಸಾಹಸಿಯಾಗಿದ್ದರೆ ಈ ಮಲ್ಲಿಕಾಲತೆಯಲ್ಲಿ ಎಷ್ಟು ಹೂವಿರುವುದೋ ಅವುಗಳನ್ನು ಕೊಯ್ಯ ದೇ ಲೆಕ್ಕಮಾಡಿಹೇಳು. ನೋಡೋಣ.

ಅನಂಗಸೇನ. ಓಹೋ! ಇದು ಬಹಳ ಸಾಹಸಕಾರ್ಯವೋ. ( ಎಂದು ಅದನ್ನು ಎಣಿಸುತ್ತಿರುವನು )

ನಿಪುಣಕ. ನಾನೇ ಮೊದಲು ಹೇಳುವೆನು. ( ಎಂದು ಅದನ್ನೆಣಿಸುತ್ತಿರುವನು )

ಕೌಟಿಲ್ಯಶೇಖರ. ( ಮರೆಯಲ್ಲಿ ) ಈ ಆಭರಣಗಳನ್ನು ನಾನು ಹೇಗೆತೆಗೆದುಕೊಳ್ಳಲಿ ಇವನನ್ನು ಹಿಡಿದುಕೊಂಡರೆ ಭೀತಿಯಿಂದ ಅಳುವನೋ ಏನೋ ಕೂಗುವುದಕ್ಕೆ ಆಸ್ಪದವಿಲ್ಲದಂತೆ ಬಾಯನ್ನು ಈ ಕರವಸ್ತ್ರ ದಿಂದ ಭದ್ರವಾಗಿ ಮುಚ್ಚಿ ವಿಮಲಾನದಿಯತೀರಕ್ಕೆ ಎತ್ತಿಕೊಂಡು ಹೋಗಿ ಅಲ್ಲಿವನ ಆಭರಣಗಳನ್ನು ಅಪಹರಿಸುವೆನು.

ಅನಂಗಸೇನ. ಎಲೈ. ನಿಪುಣಕನೇ ನಾನೆಣಿಸುವುದನ್ನು ನೀನೆಣಿಸಬೇಡ.

ನಿಪುಣಕ. ಅದರಿಂದ ನಿನಗೇನು ನಷ್ಟ?

ಅನಂಗಸೇನ. ನೀನು ಬೇರೆ ಹೂವನ್ನು ಲೆಕ್ಕಮಾಡು.

ನಿಪುಣಕ. ನೀನೇ ಬೇರೆ ಲೆಕ್ಕಮಾಡು.

ಅನಂಗಸೇನ. ಇದು ನನಗೆ ಸೇರಿದ್ದು.

ನಿಪುಣಕ. ಇದು ನನಗೂ ಸೇರಿದ್ದು. ನಿನ್ನಂತೆಯೇ ನಾನು. ( ಎಂದು ಮಲ್ಲಿ ಗೆಯ ಬಳ್ಳಿಯನ್ನು ಹಿಡಿದಳೆಯಲು ಅದುಕಿತ್ತು ಹೋಗುವದು )

ಅನಂಗಸೇನ. ಎಲೋದುಷ್ಟನೇ. ಇದನ್ನೇಕೆ ಕಿತ್ತುಹಾಕಿದೆ. ( ಎಂದು ಹೊಡೆ

ಯುವನು. ನಿಪುಣಕನೂಅನಂಗಸೇನನೂ ಹೊಡೆದಾಡುತ್ತಿರುವರು)

ಕಂಚುಕಿ. ಆ. ಈ ಬಾಲರಿಗೆ ಏನು ಹೇಳಿದರೂ ವಿಪರೀತವಾಗಿಯೇ ಪರಿಣಮಿಸುವುದಲ್ಲಾ(ಎಂದವರ ಮಧ್ಯದಲ್ಲಿ ನಿಂತು ಸಮಾಧಾನಪಡಿಸುವನು)

ಕೌಟಿಲ್ಯಶೇಖರ. ( ಮರೆಯಲ್ಲಿ ) ಈಗ ನಾನೀ ಬಾಲಕನನ್ನೆತ್ತಿಕೊಂಡು ಹೋಗಿ ಇವನ ಆಭರಣಾಗಳನ್ನೆಲ್ಲಾ ಮಧುಮತಿಗೆ ಕೊಟ್ಟು ಅವಳನ್ನು ವಶಮಾಡಿಕೊಳ್ಳುವೆನು. ಅನಂತರ ಉತ್ಪಲೆಯವಿಷಯವನ್ನು ಯೋಚಿಸುವೆನು. ( ಎಂದು ತನ್ನಕರವಸ್ತ್ರದಿಂದ ರಾಜಕುಮಾರನ ಬಾಯನ್ನು ಭದ್ರವಾಗಿ ಅಮುಕಿ ಹಿಡಿದುಕೊಂಡು ಅವನನ್ನೆತ್ತಿಕೊಂಡು ಓಡಿಹೋಗುವನು. )

ಕಂಚುಕಿ. ಎಲೈ ಆಯುಷ್ಮಂತರಾ! ನೀವುಹಾಗೆ ಕೆಲಹಮಾಡುವದು ಯುಕ್ತವಲ್ಲ. ಯುವರಾಜನಾದ ಧೀರವರ್ಮನು ನಿಮ್ಮನ್ನು ನೋಡಿದರೆ ಪರಿಹಾಸಮಾಡುವನು.

ನಿಪುಣಕ. ಎಲೋ ಅನಂಗಸೇನನೇ ! ಇನ್ನುಮೇಲೆ ನೀನು ನನ್ನೊಡನೆ ಮಾತನಾಡಿದರೆ ನಾನು ಸುಮ್ಮನಿರುವುದಿಲ್ಲ.

ಅನಂಗಸೇನ. ಏನುಹೇಳುವೆ. ಸುಮ್ಮನಿರುವುದಿಲ್ಲವೋ ! ಅದುನನಗೆ ತಿಳಿದೇಇದೇ. ಗಟ್ಟಿಯಾಗಿ ಅಳುವೆಯೇನೋ?

ನಿಪುಣಕ. ನಿನ್ನಂಥಾ ಹೇಡಿಗೆ ಅದೇ ಆಯುಧವಲ್ಲವೆ ?

ಅನಂಗಸೇನ ಇರಲಿ. ನಮ್ಮ ಯುವರಾಜನಾದ ಧೀರವರ್ಮನು ನಿನ್ನೊಡನೆ ಮಾತನಾಡದಿರುವಂತೆ ಮಾಡುವೆನು.

ನಿಪುಣಕ ಆ ಅವನು ನನ್ನೊಡನೆ ಮಾತನಾಡುವುದಿಲ್ಲವೋ! ನಿನ್ನೊಡನೆಮಾತನಾಡುವುದಲ್ಲವೋ ! ನೋಡೋಣ ( ಎಂದು ರಾಜಕುಮಾರನಿದ್ದ ಸ್ಥಳಕ್ಕೆ ಬರುವನು )

ಅನಂಗಸೇನ. ( ಹುಡಿಕಿ ) ಎಲೈಯುವರಾಜನೇ ! ಎಲ್ಲಿರುವೆ ?

ನಿಪುಣಕ. ಮಿತ್ರನೇ, ಮಿತ್ರನೇ, ಎಲ್ಲಿರುವೆ ಬೇಗಹೇಳು.

ಅನಂಗಸೇನ. ಇದೇನು ಯುವರಾಜನೆಲ್ಲಿರುವನು. ) ಎಂದು ಹುಡುಕುವನು )

ನಿಪುಣಕ. ( ಹುಡುಕಿ ಅವನನ್ನು ಕಾಣದೆ ಕಂಚುಕಿಯ ಬಳಿಗೆ ಹೋಗಿ ) ಆರ್ಯಜರಂತಕನೇ! ನನ್ನ ಮಿತ್ರನೆಲ್ಲಿ?

ಕಂ|| ಕಳವಳಮಾಂತುದು ಹೃದಯಂ |
ಬಳಸಿದೆನೀವನಮನೆಲ್ಲಮಂ ತಡಕಿದನಾಂ ||
ಕೆಳೆಯನದೆಲ್ಲಿಗೆ ಪೋದನೊ |
ತಿಳಿಯೆಂ ನೀನೀಗಳಾತನಂ ತೋರಿಪುದೈ ||೧೮||

ಕಂಚುಕಿ. ( ಭೀತಿಯಿಂದಲೂ ಆಶ್ಚರ್ಯದಿಂದಲೂ ಸ್ವಗತಂ ) ಆಃ ಇದೇನು ಈ ವನದಲ್ಲಿಯೇ ಆಡುತ್ತಿದ್ದ ಕುಮಾರನು ಎಲ್ಲಿಗೆ ಹೋದನು. ( ಎಂದು ಸುತ್ತಲೂಹುಡುಕಿ ) ಕುಮಾರಧೀರವರ್ಮನೇ ! ಯುವರಾಜನೇ? ಎಲ್ಲಿರುವೆ! ಮಾತನಾಡು ( ಎಂದು ಪ್ರತ್ಯುತ್ತರವನು ಹೊಂದದೇ ಭಯದಿಂದ ) ಆಃ ಇನ್ನೇನುಗತಿ. ಕುಮಾರನೆಲ್ಲಿ ಹೋದನೋ. ತಿಳಿಯುದಲ್ಲ ಆಸರೋವರದ ಬಳಿಗೆ ಹೋಗಿಕಾಲು ಜಾರಿ ಬಿದ್ದಿರಬಹುದೇ. ಅಯ್ಯೋ ದೈವವೇ (ಎಂದು ಯೋಚಿಸುತ್ತಿರುವನು. )

ಅನಂಗಸೇನ. ( ಕಣ್ಣೀರುತುಂಬಿ ) ಕಂ|| ವ್ಯಾಕುಲಿತಹೃದಯರಾದೆಂ |
ಭೀಕರಮಾದೆಮ್ಮ ಸಖನವಿರಹವ್ಯಥೆಯಿಂ ||
ಸಾಕು ನಡೆ ತೋರು ಕೆಳೆಯನ |
ನೇಕೀಪರಿನಮ್ಮ ನಕಟ ! ಗೋಳಾಡಿಸುವೈ ||೧೯||
( ಎಂದು ಕಂಚುಕಿಯನ್ನು ಹಿಡಿದೆಳೆಯುವನು )

ಕಂಚುಕಿ. ಆಃ. ದೈವವೇ ! ರಾಜಕುಮಾರನೆಲ್ಲಿ ಹೋದನೋ ಕಾಣೆನಲ್ಲ ಮಹಾರಾಜನಾದ ವಿಕ್ರಮಕೇಸರಿಗೆ ನಾನೇನು ಹೇಳಲಿ. ಈ ಬಾಲಕರನ್ನು ಹೇಗೆ ಸಮಾಧಾನ ಪಡಿಸಲಿ. ( ಎಂದು ನಿಟ್ಟುಸಿರುಬಿಡುತ್ತಾ ವಿಲಾಸಚಂದ್ರನನ್ನು ಬಂಧಿಸಿ ಕೆಡವಿದ್ದ ಸ್ಥಳಕ್ಕೆ ಹೋಗಿ ) ಕುಮಾರಧೀರವರ್ಮನೇ ! ಎಲ್ಲಿರುವೆ ? ಮಾತನಾಡು. ( ಎಂದಳುತ್ತಾಕೂಗುವನು )

ನಿಪುಣಕ. ( ವಿಲಾಸಚಂದ್ರನಮೇಲೆ ಹೊದಿಸಿದ್ದ ಎಲೆಗಳ ಮಧ್ಯದಲ್ಲಿ ಬಟ್ಟೆಯನ್ನುಕಂಡು ಸಂತೋಷದಿಂದ ) ಅಯ್ಯಾ ! ಜರಂತಕನೇ ಇದೊ ನನ್ನ ಮಿತ್ರನು ಸಿಕ್ಕಿದನು. ( ಎಂದು ಎಲೆಗಳನ್ನು ತೆಗೆಯುವನು )

ವಿನಯಸೇನ. ( ಸಂತೋಷದಿಂದ ) ಯುವರಾಜನೆಲ್ಲಿರುವನು ? ಬೇಗಹೇಳು ( ಎಂದು ಅಲ್ಲಿಗೆ ಬಂದು ವಿಲಾಸಚಂದ್ರನಮೇಲೆ ಎಲೆಗಳನ್ನೆಲ್ಲಾ

ತೆಗೆದು ಭೀತಿಯಿಂದ) ಅಯ್ಯೋ! ಇವನು ನಮ್ಮ ಮಿತ್ರನಲ್ಲ ಯಾವದೋಶವವು ಬಿದ್ದಿರುವದು (ಎಂದೋಡಿಹೋಗುವನು)

ನಿಪುಣಕ. ಈ ವಿಷಯುವನ್ನು ನಮ್ಮ ಕುದೆಗೆ ತಿಳಿಸುವೆನು (ಎಂದೋಡಿಹೋಗುವನು)

ಕಂಚುಕಿ. (ಆಶ್ಚರ್ಯ-ಭೀತಿಗಳಿಂದ) ಇದೇನು! ಇವರಾಡುವಮಾತು ಅರ್ಥವೇ ಆಗುವುದಿಲ್ಲವಲ್ಲ. (ಎಂದು ವಿಲಾಸಚಂದ್ರನ ಬಳಿಗೆ ಹೋಗಿ ನೋಡಿ, ಭಯದಿಂದ) ಅಯ್ಯೋ! ಆಬಾಲಕರು ಹೇಳಿದ ಮಾತು ನಿಶ್ಚಯವಾಗಿಯೇ ಇರುವುದಲ್ಲಾ. ಈಗ ನನ್ನವಸ್ಥೆಯೇನಾಗುವುದೋತಿಳಿಯದು. ಕುಮಾರನೆಲ್ಲಿರುವನೆಂದು, ಕೇಳಿದರೆ ನಾನೇನು ಹೇಳಲಿ. ಖಂಡಿತವಾಗಿಯೂ ನನಗೆ ಮರಣದಂಡನೆಯೇ ಸಂಭವಿಸುವುದು. ಆಃ ವಿಧಿಯು ವಿಲಾಸವು ಅತಿವಿಚಿತ್ರವಾದದ್ದು. ಹುಟ್ಟಿದಂದಿನಿಂದಲೂ ಇಲ್ಲಿಯೇ ಸೇವಿಸುತ್ತಿದ್ದು ಕಡೆಗೆ ಅಪಯಶಸ್ಸನ್ನು ಹೊಂದಿಸಾಯಬೇಕಾಯಿತಲ್ಲಾ (ಎಂದು ತೆರೆಯಕಡೆ ನೋಡಿ) ಪರಿವಾರಸಹಿತನಾಗಿ ಮಹಾರಾಜನೇ ಬರುತ್ತಿರುವನಲ್ಲಾ ಅಯ್ಯೋ! ವಿಧಿಯೇ (ಎಂದು ಕಳವಳಗೊಂಡು ನಿಲ್ಲುವನು)

(ವಿಕ್ರಮಕೇಸರಿಯೂ ನಿರ್ಜರಕನೂ ಅರಾತಿಸಿಂಹನೆಂಬ ಸೈನ್ಯಾಧಿಪತಿಯೂ ಪರಿವಾರ ಸಹಿತಪ್ರವೇಶಿಸುವರು)

ವಿಕ್ರಮಕೇಸರಿ.

ಕಂ|| ಅಗಲುತೆ ನಿನ್ನ ತನುಜನೀಯ |
ನಗಲುತೆ ನಿರ್ಭಾಗ್ಯನಾದನನ್ನು ಮನೀಗಳ್ ||
ಮಿಗಿಲೆನೆ ದುಃಖಮನೊದವಿಸಿ |
ನಗವೊಗಮಂ ತೋರದೆಲ್ಲಿಗೈದಿದೆಕಂದಾ ||೨೦||

ನಿರ್ಜರಕ. ಎಲೈ ಮಹಾರಾಜನೇ! ಸಮಾಧಾನವನ್ನು ಹೊಂದು. ವಿಚಾರಮಾಡದೆ ದುಃಖಪಡುವುದು ಯುಕ್ತವಲ್ಲ. (ಎಂದು ಕಂಚುಕಿಯ ಕಡೆತಿರುಗಿ) ಎಲೈ ಜರಂತಕನೇ! ನಡೆದ ವಿಷಯವನ್ನು ಮರೆ ಮಾಚದೆತಿಳಿಸು

ಕಂಚುಕಿ (ಭಯದಿಂದ ನಡುಗುತ್ತಾ) ಮಂತ್ರಿಶ್ರೇಷ್ಠನೇ! ನಾನು ಬಾಲಕರನ್ನು ಇಲ್ಲಿಗೆ ಕರೆದುಕೊಂಡು ಬರಲು ಅವರೆಲ್ಲರೂ ಸರೋವರದಬಳಿಗೆ ಹೋದರು ಆಗ ನಾನವರನ್ನು ತಡೆದು ಬೇರೆವಿಧವಾದ

ವಿನೋದದಲ್ಲಿ ಪ್ರವರ್ತಿಸುವಂತೆಮಾಡಿ ಈ ಮಲ್ಲಿಕಾಲತೆಯ ಬಳಿಗೆ ಕರೆತಂದೆನು. ಅಷ್ಟರಲ್ಲಿ ಕುಮಾರಧೀರವರ್ಮನೆಲ್ಲಿಯೋ ಕಾಣಿಸಲಿಲ್ಲವಾದ್ದರಿಂದ ಇಲ್ಲೆಲ್ಲಾ ಹುಡುಕಲು ಈಶವವು ಕಾಣಿಸಿತು. ( ಎಂದು ವಿಲಾಸಚಂದ್ರನನ್ನು ತೋರಿಸುವನು )

ನಿರ್ಜರಕ. ( ವಿಲಾಸಚಂದ್ರನ ಬಳಿಗ ಹೋಗಿ ನೋಡಿ ) ಆಃ ಇವನು ಅಶೋಕನಗರದ ನನ್ನ ಮಿತ್ರ ವಿನಯಸೇನನ ಮಗನಾದ ವಿಲಾಸಚಂದ್ರನಂತೆ ತೋರುವುದು. ಎಂದುಚೆನ್ನಾಗಿನೋಡಿ )ಆಃ ಸಂದೇಹವೇಕೆ. ಇವನು ಇನ್ನೂ ಮೃತನಾಗಿಲ್ಲ. ಇವನ ಬಂಧನಗಳನ್ನು ಜಾಗ್ರತೆಯಾಗಿ ಬಿಚಿ ಶೈತ್ಯೋಪಚಾರವನ್ನುಮಾಡಿ

ಕಂಚುಕಿ. ಅಪ್ಪಣೆ, (ಎಂದು ನೀರನ್ನು ತಂದು ಅವನೆದೆಯಮೇಲೆ ಹಾಕಿ ಎಚ್ಚರಿಸುವನು.)

ವಿಲಾಸಚಂದ್ರ. ( ಮೆಲ್ಲನೆದ್ದು ಕುಳಿತುಕೊಂಡು ಸುತ್ತಲೂ ನೋಡುವನು )

ನಿರ್ಜರಕ ಅಯ್ಯೋ! ನಿನ್ನನ್ನು ಹೀಗೆಮಾಡಿದವರುಯಾರು? ನೀನಿಲ್ಲಿಗೇಕೆಬಂದೆ?

ವಿಲಾಸಚಂದ್ರ. ವನವಿಹಾರಾರ್ಥವಾಗಿ ನಾನೀವನಕ್ಕೆ ಬರಲು ಹಿಂದಣಿಂದ ಯಾರೋ ಘಾತುಕರು ಬಂದು ಹಾಗೆಮಾಡಿದರು.

ನಿರ್ಜರಕ. ಎಲೈ ಮಹಾರಾಜನೆ? ಈತನು ಬಂದುದರಿಂದ ತಮ್ಮ ಕಾರ್ಯಕ್ಕೆ ವಿಘ್ನವುಂಟಾದೀತೆಂದು ಭಾವಿಸಿ ಯಾರೋ ಚೋರರು ಹೀಗೆಮಾಡಿರುವರು. ಕುಮಾರಧೀರವರ್ಮನು ಖಂಡಿತವಾಗಿಯೂ ಮೃತನಾಗಿಲ್ಲ. ಆಭರಣಗಳ ಆಸೆಯಿಂದ ಯಾರೋ ಹೀಗೆಮಾಡಿರುವರಲ್ಲದೆ ಮತ್ತೆ ಬೇರೆಯಲ್ಲ

ವಿಕ್ರಮಕೇಸರಿ. ನಿರ್ಜರಕನೇ! ಕುಮಾರನು ಮೃತನಾಗಿಲ್ಲವೆಂದು ಹೇಗೆಹೇಳುವೆ ?

ನಿರ್ಜರಕ. ಎಲೈ ಮಹಾರಾಜನೇ ನಮಗೆ ಶತ್ರುಗಳಾದವರೂ ಯಾರೂ ಇಲ್ಲ ಆಭರಣಗಳ ಆಶೆಯಿಂದ ದುಷ್ಟರು ಯಾರೋ ಕುಮಾರನನ್ನು ಎತ್ತಿಕೊಂಡು ಹೋಗಿರುವರು. ಯುವರಾಜನಮೇಲಿರುವ ಆಭರಣಗಳನ್ನೆಲ್ಲಾ ತೆಗೆದುಕೊಂಡು ಅವನನ್ನು ಖಂಡಿತವಾಗಿಯೂ ಬಿಟ್ಟುಬಿಡುವರು. ಈ ವಿಷಯದಲ್ಲಿ ಸ್ವಲ್ಪವೂ ಚಿಂತಿಸಬೇಡ. ( ಎಂದು ಸೈನ್ಯಾಧಿಪತಿಯ ಕಡೆತಿರುಗಿ ) ಎಲೈ ಅರಾತಿಸಿಂಹನೇ! ನಮ್ಮ ಸೇನಾಜನನನ್ನೆಲ್ಲಾ ಕುಮಾರನನ್ನು ಹುಡುಕುವುದಕ್ಕೋಸ್ಕರ ನಾಲ್ಕು

ದಿಕ್ಕಿಗೂ ಕಳುಹಿಸಬೇಕಲ್ಲದೆ ನೀನೂ ಜಾಗರೂಕತೆಯಿಂದ ಕುಮಾರಾಪಹಾರಿಗಳಾದ ಚೋರರನ್ನು ಹುಡುಕಿಹಿಡಿದುಕೊಂಡು ಬರತಕ್ಕದ್ದು.

ಅರಾತಿಸಿಂಹ. ಅಪ್ಪಣೆ (ಎಂದು ಹೊರಟುಹೋಗುವನು)

ನಿರ್ಜರಕ. ಎಲೈ ಮಹಾರಾಜನೇ! ಸಂಧ್ಯಾಕಾಲವು ಸನ್ನಿಹಿತವಾಗಿರುವುದರಿಂದ ನಡೆ ಮನೆಗೆ ಹೋಗೋಣ.

ವಿಕ್ರಮಕೇಸರಿ. ಕಂ|| ಚಂದಿರನಿಲ್ಲದದಿವದೊಂ |
ದಂದಮನಾಂತಹಹ! ಮನಕೆದುಃಖಮನೀವಾ ||
ಮಂದಿರಮನೆಂತುಪೊಗುವೆಂ |
ಕಂದನನಾಸಿಂತುನೀಗುತತಿನಿರ್ಭಾಗ್ಯಂ || ೨೧ ||

(ಎಂದು ಕಣ್ಣೀರು ತುಂಬಿ) ಎಲೈ ಮಂತ್ರಿಯೇ! ದೇವಿಗೇನು ಹೇಳಲಿ? ನಾನು ಹೇಗೆಜೀವಿಸಲಿ?

ನಿರ್ಜರಕ. ಎಲೈಮಹಾರಾಜನೇ! ಸೈರಿಸು ಸೈರಿಸು ಸರ್ವಮಂಗಳೆಯ ಕೃಪೆಯಿಂದ ಸರ್ವವೂಮಂಗಳವೇ ಅಗುವದು. ನಡೆ ಮನೆಗೆ ಹೋಗೋಣ. (ಎಂದು ರಾಜನೊಡನೆ ಹೊರಟುಹೋಗುವನು.

ವಿಲಾಸಚಂದ್ರ. ಇದೇನು ನನ್ನ ಯೋಚನೆಯೊಂದಾದರೆ ಇಲ್ಲಿನಡೆದ ವಿಷಯಗಳೇ ಬೇರೆಯಾಗಿರುವುದು ಬಳ್ಳೇದು ಈ ವಿಷಯಗಳನ್ನು ಯೋಚಿಸಿ ಫಲವಿಲ್ಲ. "ಶ್ರೇಯಾಂಸಿಬಹುವಿಘ್ನಾನಿ" ಯೆಂಬಂತೆ ತೊಂದರೆಗಳುಂಟಾಗುವುದು ಸಹಜವೇ ಅಲ್ಲವೆ. (ಎಂದು ನೋಡಿ) ಓಹೋ ಆಗಲೇ ಸೂರ್ಯನು ಅಸ್ತನಾದನು ಈಗಬಾದರೋ.

ಕಂ|| ದಿನಮಣಿಪಶ್ಚಿಮವನಿತಾ
ಮನನಾಗುತ್ತಪೋದನೀಜಕೋರನುನೊಲವಿಂ ||
ಮನದನ್ನೆಯೊಡಂಕೂಡುತೆ ||
ಬಿನದಂಗೊಳುತಿಪ್ಪದಿಳೆಯೊಳವರೇ ಸುಖಿಗಳ್ || ೨೨ ||

ಈಗ ನಾನೂ ಹೋಗಿ ನನ್ನ ಮಿತ್ರನಾದ ಕೌಟಿಲ್ಯ ಶೇಖರನೊಡನೆ ಮಾತನಾಡುತ್ತಾ ಈ ರಾತ್ರಿಯನ್ನು ಕಳೆಯುವೆನು. (ಎಂದು ಹೊರಟು ಹೋಗುವನು.)

ದ್ವಿತೀಯಾಂಕ್ಯಸಮಾಪ್ತಂ

|| ತೃತೀಯಾಂಕಂ ||

( ಅಮರದತ್ತನ ಪ್ರವೇಶ )

ಅಮರದತ್ತ. ಆಃ ನೀಚನಾದ ಕೌಟಿಲ್ಯಶೇಖರನು ನನ್ನಲ್ಲಿ ದ್ವೇಷವನ್ನಿಟ್ಟು ನನ್ನನ್ನು ಹೇಗಾದರೂ ಹಿಡಿದು ಸಂಹರಿಸಬೇಕೆಂದು ಸಮಯವನ್ನು ನಿರೀಕ್ಷಿಸುತ್ತಿರುವನು ಮಿತ್ರನಾದ ವಿಲಾಸಚಂದ್ರನಾದರೋ ಅವನ ಮಾತಿಗೆ ಮರುಳಾಗಿ ನನ್ನನ್ನು ತನ್ನ ವೈರಿಯೆಂದೇನಿಶ್ಚಯಿಸಿರುವನು. ಈಗ ನಾನು ಕೌಟಿಲ್ಯನು ಬರೆದಿರುವ ಈ ಪತ್ರಿಕೆಯ ವಿಷಯವನ್ನು ವಿಲಾಸಚಂದ್ರನಿಗೆ ತಿಳಿಸಿದರೂ ಅವನು ನನ್ನ ಮಾತನ್ನು ನಂಬುವಂತೆ ತೋರಲಿಲ್ಲ ಏನುಮಾಡಲಿ ( ಎಂದು ತಿರುಗಿ ನೋಡಿಸಂತೋಷದಿಂದ ) ಅಯ್ಯಾ ಬಂಧುರಕನೇ ! ನಿನ್ನನ್ನೇ ನಿರೀಕ್ಷಿಸುತ್ತಾ ಇಲ್ಲಿನಿಂತಿರುವೆನು.

ಬಂಧುರಕ. ( ಪ್ರವೇಶಿಸಿ ) ಅಯ್ಯಾ! ಇಂದಿನ ವಿಶೇಷ ವಿದ್ಯಮಾನಗಳನ್ನು ಕೇಳಿದೆಯೋ?

ಅಮರದತ್ತ. ಅದೇನು?

ಬಂಧುರಕ. ಪುಷ್ಕರೋದ್ಯಾನದಲ್ಲಿ ನಡೆದ ವಿಷಯವು ತಿಳಿಯಿತಷ್ಟೆ.

ಅಮರದತ್ತ. ಮಂತ್ರಿಯ ಉದ್ಯಾನವನದಲ್ಲಿಯೋ? ಅದೇನುಹೇಳು.

ಬಂಧುರಕ. ಯುವರಾಜನಾದ ಧೀರವರ್ಮನನ್ನು ಯಾರೋ ಎತ್ತಿಕೊಂಡು ಹೋದರು.

ಅಮರದತ್ತ. ಏನು! ಇದು ನಿಶ್ಚಯವೆ?

ಬಂಧುರಕ. ಇಷ್ಟೇ ಅಲ್ಲ. ನಮ್ಮ ವಿಲಾಸಚಂದ್ರನನ್ನು ಹೊಡೆದು ಕೈಕಾಲಾಡಿಸದಂತೆ ಬಂಧಿಸಿ ಅಲ್ಲಿಯೇ ಕೆಡವಿ ಒಬ್ಬರಿಗೂ ತಿಳಿಯದಂತೆ ಅವನ ಮೇಲೆ ಎಲೆಗಳನ್ನು ಮರೆಮಾಡಿದ್ದರು.

ಅಮರದತ್ತ. ಹೀಗೆಯಾರು ಮಾಡಿರಬಹುದು.

ಬಂಧುರಕ. ಇನ್ನುಯಾರು ಹೀಗೆಮಾಡುವರು ! ಆದುಷ್ಟನೇ.

ಅಮರದತ್ತ. ಏನು. ಕೌಟಿಲ್ಯನು ಹೀಗೆಮಾಡಿದನೇ?

ಬಂಧುರಕ. ಸಂದೇಹವೇಕೆ, ಅವನು ಮಧುಮತಿಯ ಮನೆಗೆ ಕೆಲವು ಅನರ್ಥ

ವಾದ ಆಭರಣಗಳನ್ನು ತೆಗೆದುಕೊಂಡು ಹೋಗಿದ್ದನೆಂದು ಅವಳ ದಾಸಿಯು ನನ್ನೊಡನೆ ಹೇಳಿದಳು ಆದ್ದರಿಂದಲೇ ಇದು ಕೌಟಿಲ್ಯನ ಕುಟಿಲವೆಂದು ಹೇಳಬಲ್ಲೆನು. ಇದಲ್ಲದೆ ಮತ್ತೊಂದು ದುಃಖಕರ ವಾದ ವಿಷಯವನ್ನು ಹೇಳುವೆನು ಕೇಳು. ಸೈನ್ಯಾಧಿಪತಿಯಾದ ಅರಾತಿಸೂದನು ವಿಲಾಸಚಂದ್ರನನ್ನು ಕರೆಯಿಸಿ ನಿನಗ ಯಾರಲ್ಲಿ ಅನುಮಾನವಿರುವುದೆಂದು ಕೇಳಿದುದಕ್ಕೆ ಅವನು ಅಮರದತ್ತನಲ್ಲಿ ಅನುಮಾನ ವಿರುವುದೆಂದು ಹೇಳಿರುವನು.

ಅಮರದತ್ತ. ಏನು! ನಮ್ಮ ವಿಲಾಸಚಂದ್ರನು ಹೀಗೆಹೇಳಿದನೇ ?

ಬಂಧುರಕ. ಹೌದು ಈಗ ನೀನು ಖಂಡಿತವಾಗಿಯೂ ಈವೂರಿನಲ್ಲಿರಬೇಡ ಎಲ್ಲಾದರೂ ಹೊರಟುಹೋಗು.

ಅಮರದತ್ತ. ಛೀ ಬಿಡು ನಾನೆಂದಿಗೂ ಹಾಗೆ ಹೋಗಲಾರೆ.

ಬಂಧುರಕ ಅಯ್ಯಾ ! ನಿನಗೆ ತಿಳಿಯದು. ನಾವುಮಾಡುತ್ತಿರುವ ಪ್ರಯತ್ನವು ದೈವಕೃಪೆಯಿಂದ ಜಾಗ್ರತೆಯಲ್ಲಿಯೇ ಸಫಲವಾದೀತು. ಅದುವ ರೆಗೂ ನೀನು ಹೊರಗಿರುವುದು ಉತ್ತಮ. ಹಾಗಲ್ಲದಿದ್ದರೆ ವಿಲಾಸಚಂದ್ರನ ಅವಸ್ಥೆಯು ವಿಪರೀತವಾಗಿ ಪರಿಣಮಿಸುವುದು. ಅವರಿಬ್ಬರೂ ನಿನಗೆ ಖಂಡಿತವಾಗಿ ಕೇಡನ್ನೂಮಾಡುವರು. ಇನ್ನು ನಾನು ಹೋಗುವೆನು. ನೀನುಮಾತ್ರ ಸಾವಕಾಶ ಮಾಡಬೇಡ. ಜಾಗರೂಕನಾಗಿರು (ಎಂದು ಹೊರಟು ಹೋಗುವನು.)

ಅಮರದತ್ತ. ಆ ಕೌಟಿಲ್ಯನು ಕೇಡನ್ನೇ ಉಂಟುಮಾಡುತ್ತಿದ್ದರೂ ವಿಲಾಸಚಂದ್ರ ನಿಗೆ ಅವನಲ್ಲಿ ವಿಶ್ವಾಸವು ಹೆಚ್ಚುತ್ತಿರುವದು. ನಾನು ಹಿತೈಷಿಯಾ ಗಿದ್ದರೂ ನನ್ನಲ್ಲಿ ದ್ವೇಷವು ಹೆಚ್ಚುತ್ತಿರುವುದು. ಆ ವಿಲಾಸಚಂ ದ್ರನು ಸೈನ್ಯಾಧಿಪತಿಯೊಡನೆ ನನ್ನಲ್ಲಿ ಅನುಮಾನವಿರುವುದೆಂದು ಹೇಳಿದನೇ ! ಅಯ್ಯೋ, ಬಂಧುರಕನು ಹೇಳಿದಂತೆ ಅವರಿಬ್ಬರೂ ಸೇರಿ ನನಗೆ ಕೇಡನ್ನುಂಟುಮಾಡದೇ ಬಿಡರು. ಒಂದುವೇಳೆ ನನ್ನನ್ನು ಮರಣದಂಡನೆಗೂ ಗುರಿಪಡಿಸಬಲ್ಲರು. ಅನಂತರ ಕೌಟಿಲ್ಯನ ದುರಾಲೋಚನೆಗಳು ನಿರ್ವಿಘ್ನವಾಗಿ ನೆರವೇರುವುದರಲ್ಲಿ ಸಂದೇಹ ವಿಲ್ಲ. ಸತ್ಯವನ್ನವಲಂಬಿಸಿರುವ ನನ್ನ ಪ್ರಯತ್ನಕ್ಕೆ ವಿಘ್ನಗಳೇ ಉಂ ಟಾಗುತ್ತಿರುವವು ಅಸತ್ಯವನ್ನವಲಂಬಿಸಿರುವ ಕೌಟಿಲ್ಯನ ಪ್ರಯತ್ನ

ಗಳು ಇಚ್ಛಾಮಾತ್ರದಿಂದಲೇ ನೆರವೇರುತ್ತಿರುವುದಲ್ಲಾ! ( ಎಂದು ಚಿಂತಿಸಿ ) ಇದಕ್ಕೆ ನಾನು ಯೋಚಿಸಿ ಫಲವಿಲ್ಲ ವಿಧಿಯು ವಿಮುಖನಾದರೆ ಮನುಷ್ಯನ ಪ್ರಯತ್ನವು ಹೇಗೆನಡೆದೀತು ! ( ಎಂದು ನಿಟ್ಟುಸಿರುಬಿಟ್ಟು ) ಎಲೈ ! ಅಯುಕ್ತಕಾರಿಯಾದ ವಿಧಿಯೇ ! ಉಚಿತಾನುಚಿತಗಳನ್ನರಿಯದ ಸ್ವೇಚ್ಛಾವಿಹಾರಿಯೇ !

ಕ|| ಉತ್ತಮಗುಣವೈರಿಗಳಂ |
ವಿತ್ತಮೆ ಪರದೈವಮೆಂದು ಭಾವಿಸುವವರಂ ||
ಮತ್ತರ ನಿಳೆಯೊಳಗಿರಿದು |
ವೃತ್ತರನಪ್ರತಿಹತರನೆಸಗುವೈ ವಿಧಿಹತಕಾ!|| ೧ ||

ಆಃ ಎಲೈ ವಿಧಿಯೇ ! ಚಿರಾಯುವಾದ ಪತಿಗೆ ಅಲ್ಪಾಯುವಿನ ಪತ್ನಿಯನ್ನು ಸಂಘಟಿಸುವೆ. ಧನವಂತನನ್ನು ಅಲ್ಪಾಯುವನ್ನಾಗಿ ಮಾಡುವೆ. ಬಡವನನ್ನು ದೀರ್ಘರೋಗಿಯನ್ನಾಗಿ ಮಾಡುವೆ. ಸುಂದರಿಯಾದಸ್ತ್ರೀಗೆ ಕುರೂಪಿಯಾದ ಪುರುಷನನ್ನೂ ಕುರೂಪಿಯಾದ ಸ್ತ್ರೀಗೆ ಸುಂದರನಾದ ಪುರುಷನನ್ನೂ ಪತಿಯನ್ನಾಗಿ ಮಾಡುವೆ. ದುಷ್ಟರನ್ನು ಸಂತೋಷಪಡಿಸುವೆ. ಸಜ್ಜನರನ್ನು ಸಂಕಟಪಡಿಸುವೆ. ಲೋಕದಲ್ಲಿ ನಿನ್ನ ವಿಲಾಸವು ಅತಿವಿಚಿತ್ರವಾದದ್ದು ಹಾಗೆಯೇಸರಿ.

ಕಂ|| ಕಾಡಿದೆಯಾರಾಘವನಂ |
ಕಾಡಿದೆ ನೀಂ ಪಾಂಡುಸುತರನಮರಾಧಿಪನಂ ||
ಕಾಡಿದೆ ಮುನೀಂದ್ರಕುಲಮಂ|
ಕಾಡಿದೆ ವಿಧಿ ! ಭೂಮಿಯಲ್ಲಿ ನಿನಗಿದಿರಿಲ್ಲಂ || ೨ ||

( ತೆರೆಯಲ್ಲಿ ) ಕಂ|| ಜನಪತಿಯುಪುತ್ರನೆನಿಸಿಯು |
ಮನೇಕ ದಿವ್ಯಾಂಬರಾದಿ ವಸ್ತುಗಳಿರ್ದುಂ ||
ವನದೊಳ್ ಚಳಿಯಿಂ ನಡುಗುತ |
ಮನಾಥನಾಗಿರ್ಪೆನಕಟ!ವಿಧಿಯೇಪಿರಿದೈ || ೩ ||

ಅಮರದತ್ತ. ಇದೇನು! ಇತ್ತಕಡೆಯಾವನೋ ಬಾಲಕನು ನನ್ನಂತೆಯೇ ರೋದಿಸುತ್ತಿರುವನು. ಒಳ್ಳೇದು ಹೋಗಿನೋಡುವೆನು. ( ಎಂದು ಹೊರಟು ಹೋಗುವನು )

( ಅನಂತರ ಪ್ರಲಾಪಿಸುತ್ತಿರುವ ಧೀರವರ್ಮನ ಪ್ರವೇಶ )

ಧೀರವರ್ಮ. ಮಹಾರಾಜನಾದ ವಿಕ್ರಮಕೇಸರಿಗೆ ಮಗನಾಗಿ ಯುವರಾಜಪದ ವಿಗೆ ಪಾತ್ರನಾಗಿ ಅಡಿಗಡಿಗೂ ಅಪ್ಪಣೆಯನ್ನೇ ಇದಿರು ನೋಡುತ್ತಾ ಉಪಚರಿಸುವ ದಾಸ ದಾಸೀಜನರಿಂದ ಪರಿವೃತನಾಗಿ ಸಕಲ ಭೋಗ ಗಳನ್ನೂ ಅನುಭವಿಸುತ್ತಿದ್ದ ನಾನು ಈ ವಿಜನವಾದ ವನದಲ್ಲಿ ಏಕಾಂಗಿಯಾಗಿ ಭಯಪಡುತ್ತಾ ಈ ಕತ್ತಲೆಯಲ್ಲಿ ಗೋಳಾಡು ತ್ತಿದ್ದರೂ ಯಾರೂ ಕೇಳುವವರಿಲ್ಲವಲ್ಲ. ಅಯ್ಯೋ ಬಾಯಾರಿಕೆ ಯಿಂದ ಗಂಟಲೊಣಗಿ ಹೋಗುತ್ತಿರುವುದು. ಏನು ಮಾಡಲಿ ಕೈ ಕಾಲುಗಳು ನಡುಗುತ್ತಿರುವುದು. ಚಳಿಯಾದರೋ ಸಹಿಸು ವುದಕ್ಕಾಗುವದಿಲ್ಲ. ಎಲೌ ಜನನಿಯೇ! ನಿನ್ನ ಸುಕುಮಾರನಾದ ನಾನು ಇಂಥಾ ಕಷ್ಟಗಳನ್ನು ಅನುಭವಿಸುತ್ತಿರುವುದು ನಿನಗೆ ತಿಳಿ ಯಲಿಲ್ಲವೆ. (ಎಂದಳುತ್ತಾ)

ಕಂ|| ಪ್ರಕಟಿತನಿಜಸಾಹಸದಿಂ|
ಸಕಲೋರ್ವೀಶಳಮನ್ನೈದಿಸಲವುವೆಜನಕಾ||
ನಕರುಣನೆನೆನನ್ನೊರ್ವನ|
ನಕಟಾ!ನೀಂಪೊರೆಯಲಾರೆಯೇನೀವನದೊಳ್||೪||

(ಅನಂತರ ಅಮರದತ್ತನ ಪ್ರವೇಶ)

ಅಮರದತ್ತ ಅಯ್ಯಾ ಬಾಲಕನೇ! ನೀನು ಯಾರು? ಈ ಆರಣ್ಯದಲ್ಲಿ ಏಕಾಂಗಿ ಯಾಗಿ ಅಳುತ್ತಿರುವುದಕ್ಕೆ ಕಾರಣವೇನು?

ಧೀರವರ್ಮ (ಅಳುತ್ತಾ) ಅಯ್ಯಾ ಮಹಾತ್ಮನೆ! ನಾನು ಸರಸನಗರದ ರಾಜನಾದ ವಿಕ್ರಮಕೇಸರಿಯ ಮಗ ನನ್ನ ಹೆಸರು ಧೀರವರ್ಮ. ನನ್ನೊಡ ನಾಡಿಗಳೊಡನೆ ನಾನು ಪುಷ್ಕರೋದ್ಯಾನವೆಂಬ ವನಕ್ಕೆ ಆಡುವು ದಕ್ಕೋಸ್ಕರ ಹೋಗಿರಲು ಅಲ್ಲಿ ಒಬ್ಬಾನೊಬ್ಬ.................. (ಎಂದು ನಡುಗುವನು)

ಅಮರದತ್ತ ಎಲೈ ಬಾಲಕನೆ! ಭಯಪಡಬೇಡ ಹೇಳು ನಾನಿರುವಾಗ ನಿನಗೆ ಭಯವೇನು?

ಧೀರವರ್ಮ ಒಬ್ಬಾನೊಬ್ಬ ಘಾತುಕನು ಉಸಿರಾಡದಂತೆ ನನ್ನ ಬಾಯನ್ನು ಒಂದು ಕರವಸ್ತ್ರದಿಂದ ಬಿಗಿದು ನನ್ನನ್ನೆತ್ತಿಕೊಂಡು ಈ ಆರಣ್ಯಕ್ಕೆ ಬಂದು ನನ್ನ ಮೈ ಮೇಲಿದ್ದ ಆಭರಣಗಳನ್ನೆಲ್ಲಾ ತೆಗೆದುಕೊಂಡನು.

ನನ್ನ ಹಸ್ತಾಭರಣವು ಸುಲಭವಾಗಿ ತೆಗೆಯುವುದಕ್ಕೆ ಸಾಧ್ಯವಾಗದಿದ್ದುದರಿಂದ ನನ್ನ ಹಸ್ತಗಳನ್ನು ಛೇದಿಸಿ ಈ ಆಭರಣಗಳನ್ನು ತೆಗೆದುಕೊಳ್ಳಬೇಕೆಂದು ಆಯುಧವನ್ನು ತರುವುದಕ್ಕೋಸ್ಕರ ಹೋಗಿರುವನು. ಎಲೈ ಮಹಾತ್ಮನೆ! ನೀನು ದಯವಿಟ್ಟು ನನ್ನನ್ನು ಕಾಪಾಡು ಕಾಪಾಡು (ಎಂದು ಬಿದ್ದು ಮೂರ್ಛಿತನಾಗುವನು)

ಅಮರದತ್ತ ಆ: ಈಗ ಬಂಧುರಕನು ಹೇಳಿದ ವಿಷಯವೆಲ್ಲಾ ನಿಶ್ಚಯವೇ ಆಯಿತು. (ಎಂದು ಅಲ್ಲಿ ಬಿದ್ದಿದ್ದ ಕರವಸ್ತ್ರವನ್ನು ತೆಗೆದುಕೊಂಡು) ಆ: ಇದೇನು ಈ ಕರವಸ್ತ್ರದಲ್ಲಿ ಏನೋ ಬರೆಯಲ್ಪಟ್ಟಿರುವುದು. (ಎಂದು ನೋಡಿ) ಆ: ಆ ದುಷ್ಟನ ಹೆಸರೇ ಇರುವುದು ಈಗ ನನ್ನ ಪ್ರಯತ್ನಗಳೆಲ್ಲಾ ಅನಾಯಾಸವಾಗಿ ನೆರವೇರುವುದು. ಈ ವಸ್ತ್ರವೂ ರಾಜಕುಮಾರನೂ ಬಂಧುರಕನು ತೆಗೆದುಕೊಂಡು ಬಂದುಕೊಟ್ಟ ಪತ್ರಿಕೆಯೂ ಇವುಗಳೆಲ್ಲಾ ಆ ನೀಚನ ಅಪರಾಧಗಳನ್ನು ವ್ಯಕ್ತಪಡಿಸುವುದಕ್ಕೆ ಸಹಾಯಕಾರಿಗಳಲ್ಲವೆ (ಎಂದು ವಿಸ್ಮೃತಿಯನ್ನಭಿನಯಿಸಿ) ಈಗ ನಾನೀರಾಜಕುಮಾರನನ್ನು ಕರೆದುಕೊಂಡು ಹೋದರೆ ವಿಲಾಸಚಂದನು ನನ್ನ ಮೇಲೆ ಅನುಮಾನ ವಿರುವುದೆಂದು ಹೇಳಿರುವುದರಿಂದ ನಾನೇ ಇವನನ್ನು ಎತ್ತಿಕೊಂಡು ಹೋಗಿ ಆಭರಣಗಳನ್ನು ಅಪಹರಿಸಿ ಮಹಾಜನ ವಿಶ್ವಾಸವನ್ನು ಸಂಪಾದಿಸಿಕೊಳ್ಳಬೇಕೆಂದು ಈ ರಾಜಕುಮಾರನನ್ನು ಕರೆತಂದಿರುವೆನೆಂದು ಆ ಕೌಟಿಲ್ಯನು ಸಕಲರಿಗೂ ಅನುಮಾನವನ್ನು ಉಂಟು ಮಾಡಬಹುದು. ಈಗ ಈತನನ್ನು ಇಲ್ಲಿಯೇ ಬಿಟ್ಟು ಹೋದರೆ ನನ್ನ ಕಾರ್ಯವು ಸಫಲವಾಗಲಾರದು. ಇದೂ ಅಲ್ಲದೆ ಇಂಥಾ ಅವಸ್ಥೆಯಲ್ಲಿರುವ ಈ ಬಾಲಕನನ್ನು ಇಲ್ಲಿ ಬಿಟ್ಟು ಹೋಗುವುದೂ ಧರ್ಮವಲ್ಲ. ಆದ್ದರಿಂದ ಈಗ ಈ ಕುಮಾರನನ್ನು ಸಮೀಪದಲ್ಲಿರುವ ದ್ರುಹಿಣಪುರಕ್ಕೆ ಕರೆದುಕೊಂಡು ಹೋಗಿ ಉಪಚರಿಸಿ ಅಲ್ಲಿಯೇ ಕೆಲವು ಕಾಲ ರಹಸ್ಯವಾಗಿರುವೆನು. ಅನಂತರ ಏನು ನಡೆಯುವುದೋ ನೋಡೋಣ (ಎಂದು ಧೀರವರ್ಮನನ್ನೆತ್ತಿಕೊಂಡು ಹೊರಟು ಹೋಗುವನು)

(ಅನಂತರ ಕೌಟಿಲ್ಯಶೇಖರನ ಪ್ರವೇಶ)

ಕೌಟಿಲ್ಯ ಆ: ವೇಶ್ಯೆಯರನ್ನು ನಂಬುವದು ಬಹುಕಷ್ಟ

ಕಂ|| ಪುಸಿಗೆತವರ್ಮಾನೆವೋಲಕೆ|
ರಸೆಯೊಳಗೊಪ್ಪಿರ್ಪ ಬೀಡು ಚಲ್ಲಾಟಕೆಮೇಣ್||
ಎಸೆದಿರ್ಪ ಪಾಳಯಂ ಭಾ||
ವಿಸೆ ಬೆಲೆವೆಣ್ ಪುರುಷವರ್ಗಹಸನೌಷಧಮಲ್ತೆ||೫||

ನಾನು ಬಹುಸಾಹಸದಿಂದ ತೆಗೆದುಕೊಂಡು ಹೋದ ಈ ಒಡವೆಗಳನ್ನು ಆ ವಂಚಕಿಯು ಅಂಗೀಕರಿಸಲಿಲ್ಲವಲ್ಲ. ಇದಕ್ಕೆ ಕಾರಣವೇನಿರಬಹುದು. ಇವುಗಳು ಅತ್ಯಲ್ಪವಾದವುಗಳೆಂದೇನಾದರೂ ಹೀಗೆ ಮಾಡಿದಳೆ? ಇಲ್ಲ ಹಾಗಿರಲಾರದು. ಅವಳ ಬಳಿಯಲ್ಲಿರುವ ಆಭರಣಗಳೆಲ್ಲಾ ಈ ಸರದಲ್ಲಿರುವ ಒಂದು ಮುತ್ತಿನ ಬೆಲೆಯನ್ನೂ ಬಾಳಲಾರವು. ಇದಲ್ಲದೆ "ಈ ಅನರ್ಘವಾದ ಆಭರಣಗಳು ನಿನಗೆಲ್ಲಿ ಸಿಕ್ಕಿದುವು" ಎಂದು ಕೇಳಿದಳು. ಆದ್ದರಿಂದ ಇವುಗಳನ್ನು ನಾನು ಕದ್ದು ತಂದಿರುವೆನೆಂದು ಅವಳು ಸಂಶಯಪಟ್ಟು ತಿರಸ್ಕರಿಸಿರಬಹುದೆಂದು ತೋರುವುದು ಆ! ಒಬ್ಬರೂ ಅರಿಯದಂತೆ ನಾನು ಮಾಡಿದ ಕಾರ್ಯವನ್ನು ಆವಾರಾಂಗನೆಯು ತಿಳಿದುಕೊಂಡಳಲ್ಲಾ! ಅವಳ ಚಾತುರ್ಯವನ್ನೇನು ಹೇಳಲಿ, ಅಥವಾ ಇದೇನು ಅತಿಶಯವಲ್ಲ.

ಕಂ|| ಅಮವರಾ(?)ಪರಿಭಾಪಿಸಲಾ|
ರಮಣಿಯರೊಳೆಮೆರೆಗುಮಲ್ತೆ ಚಾತುರ್ಯಂತಾಂ||
ಶ್ರಮಮೇಂ(?)ಸಮಸ್ತಪಿಟಲೋ|
ಕಮನೊಲಿಪಾವೇಶ್ಯೆಯರ್ಗೆ ಜಗತೀತಳದೊಳ್||೬||

ಅದು ಹಾಗಿರಲಿ. ಈಗ ಈ ಆಭರಣಗಳನ್ನೇನು ಮಾಡಲಿ? ಇದನ್ನು ತೆಗೆದುಕೊಂಡು ಹೋಗಿ ಮಾರುವುದೆಲ್ಲಿ? ಇದಕ್ಕೆ ತಕ್ಕ ಬೆಲೆಯನ್ನು ಕೊಡುವವರು ಯಾರು? ಒಂದು ವೇಳೆ ಸಾಸಿದನ್ನು ತೋರಿಸುತ್ತಿರುವಾಗ ಯಾರಾದರೂ ಯಾಮಿಕರು ಕಂಡರೆ ನನ್ನನ್ನು ರಾಜಶಾಸನಕ್ಕೆ ಗುರಿಮಾಡಿಸದೇ ಬಿಡಲಾರರು. ಇವುಗಳನ್ನು ನದಿಯಲ್ಲಿ ಬಿಸಾಡಲೇ? ಅಯ್ಯೋ! ಅಷ್ಟು ಸಾಹಸದಿಂದ ಸಂಪಾದಿಸಿಕೊಂಡು ಬಂದುದನ್ನು ವ್ಯರ್ಥವಾಗಿ ನದಿಯಲ್ಲಿ ಹಾಕುವುದಕ್ಕೆ ನನ್ನ ಮನಸ್ಸು ಒಪ್ಪುವುದಿಲ್ಲ. (ಎಂದು ಯೋಚಿಸುತ್ತಿರುವನು)

(ವಿಲಾಸಚಂದ್ರನ ಪ್ರವೇಶ)

ವಿಲಾಸಚಂದ್ರ ವೃ|| ವಲ್ಲಭೆಯುಂ ನಾಂತವೆ ವಿಲೋಕಿಪಮುನ್ನ ಮತೀವರಾಗದಿಂ|
ಸೊಲ್ಲಿಪಮುನ್ನ ಮಾಕುರುಳನೊಯ್ಯನೆತಿರ್ದುವಮುನ್ನ ಮೊಲ್ಮೆಯಿಂ
ಮಲ್ಲಿಗೆಯುಂಬಳಲ್ಮುಡಿಗೆ ಸಾರ್ಚುವಮುನ್ನ ಮಯುಕ್ತಿಕಾರಿಕಂ|
ದಿಲ್ಲದವಿಘ್ನಮಂ ವಿಧಿಯುಮಾರ್ಚಿದುದುರ್ವಿಯೊಳೆಂತುಜೀವಿಪೆಂ||೭

ಕೌಟಿಲ್ಯ (ವಿಲಾಸಚಂದ್ರನನ್ನು ಕಂಡು ಆಶ್ಚರ್ಯದಿಂದ) ಆ ಉದ್ಯಾನವನದಲ್ಲಿ ಇವನ ಬಂಧನಗಳನ್ನು ಶಿಕರಿಸಿದವರು ಯಾರು? ಮೂರ್ಛಿತನಾಗಿ ಬಿದ್ದಿದ್ದ ಇವನು ಎಚ್ಚರವಾದದ್ದು ಹೇಗೆ? ಒಳ್ಳೇದು ಎಲ್ಲವನ್ನೂ ತಿಳಿದುಕೊಳ್ಳುವೆನ. (ಎಂದು ವಿಲಾಸಚಂದ್ರನ ಬಳಿಗೆ ಹೋಗಿ) ಅಯ್ಯಾ! ಆ ಉತ್ಪಲೆಯ ಭ್ರಮೆಯಿಂದ ನಿನಗೆ ಆಡಿದ ಮಾತು ಜ್ಞಾಪಕವಿರಲಾರದೆಂದು ತೋರುವದು

ವಿಲಾಸಚಂದ್ರ ನೀನು ಹೇಳಿದ್ದು ನಿಶ್ಚಯ. ನಿನಗೂ ನನ್ನಂತೆಯೇ ಇರಬಹುದು.

ಕೌಟಿಲ್ಯ ಅದು ಹೇಗೆ?

ವಿಲಾಸಚಂದ್ರ ನಿನಗೆ ಆ ಮಧುಮತಿಯ ಭ್ರಮೆ ಹಿಡಿದಿರುವದಲ್ಲವೆ?

ಕೌಟಿಲ್ಯ ನಾನು ಚಂದ್ರಹಾರವನ್ನು ತರುವುದರೊಳಗಾಗಿ ನೀನೆಲ್ಲಿ ಹೋದೆ?

ವಿಲಾಸಚಂದ್ರ ಬಹುಕಾಲ ನಿರೀಕ್ಷಿಸಿದಾಗ್ಯೂ ನೀನು ಬಾರದಿದ್ದುದರಿಂದ ನಾನು ಪುಷ್ಕರೋದ್ಯಾನಕ್ಕೆ ಹೋದೆನು.

ಕೌಟಿಲ್ಯ ಕ್ಷಣಮಾತ್ರ ಕಾಲವನ್ನು ಬಹುಕಾಲವೆಂದು ಹೇಳುವೆಯಲ್ಲಾ ಸು ಅದು ನಿನ್ನ ತಪ್ಪಲ್ಲ. ನಾನು ನಿನ್ನನ್ನು ಸಂಗಡ ಕರೆದುಕೊಂಡು ಹೋಗದಿದ್ದುದರಿಂದ ಇದು ನನ್ನ ತಪ್ಪು.

ವಿಲಾಸಚಂದ್ರ ಅಯ್ಯಾ ಇದು ಯಾರ ತಪ್ಪೂ ಅಲ್ಲ ಸ್ವಭಾವಜನ್ಯವೆ ಅಲ್ಲವೆ? ಕೇಳು.

ಕಂ|| ಮಲಯಾನಿಲ ನಧುಬಗೆಯಲ್|
ಪ್ರಲಯಾನಿಲನೆನಿಕುಮೆಸೆವ ಸಸಿ ಬಿಸಿ ಯುಕ್ಕಂ||
ತೊಳಗುವ ಕುಮುದಂದುಃಖದ|
ಮಿಳಿಯೊಳ್ ವನಿತಾವನಂಗೆ ನಿಮಿಷಂ ಯುಗಮೈ||೮||

ಕೌಟಿಲ್ಯ ಅಯ್ಯಾ! ಅದು ಹಾಗಿರಲಿ ಉದ್ಯಾನವನದಲ್ಲಿ ಯಾರೋಘಾತುಕರು ನಿನ್ನನ್ನು ಹೊಡೆದು ಕೆಡವಿ ರಾಜಕುಮಾರನನ್ನು ಎತ್ತಿಕೊಂಡು ಓಡಿಹೋದರೆಂದು ಕೇಳಿದೆನು. ಇದು ನಿಶ್ಚಯವೆ?

ವಿಲಾಸಚಂದ್ರ ಮಿತ್ರನೇ ! ಆ ವಿಷಯವನ್ನು ನಿನಗೆ ಹೇಳಿದವರು ಯಾರು?

ಕೌಟಿಲ್ಯ ನಮ್ಮ ಹೊಸ ಸೇವಕನಾದ ಬಂಧುರಕನು ಹೇಳಿದನು.

ವಿಲಾಸಚಂದ್ರ ಮಿತ್ರನೇ! ಆ ಉದ್ಯಾನವನದಲ್ಲಿ ನಡೆದ ವಿಷಯವೆಲ್ಲಾ ನಿಶ್ಚಯ. ಈಗಲಾದರೋ ಅಲ್ಲಿಗೆ ವಿಹಾರಾರ್ಥವಾಗಿ ಯಾರೂ ಪ್ರವೇಶಿಸ ಕೂಡದೆಂದು ಸೈನ್ಯಾಧಿಪತಿಯ ಆಜ್ಞೆಯಾಗಿರುವುದು. ನಾನಿನ್ನು ಆ ಉತ್ಪಲೆಯನ್ನೆಲ್ಲಿ ನೋಡಲಿ !

ಕೌಟಿಲ್ಯ ಅಯ್ಯಾ ! ನೀನು ನನ್ನ ಮೇಲೆ ಕೋಪಿಸಿಕೊಳ್ಳದಿದ್ದರೆ ಹೇಳುವೆನು.

ವಿಲಾಸಚಂದ್ರ ಅದೇನು?

ಕೌಟಿಲ್ಯ ನೀನವಳ ಆಸೆಯನ್ನು ಬಿಡು.

ವಿಲಾಸಚಂದ್ರ ಕಂ|| ಉಳಿವೆಂ ಪ್ರಾಣದೊಳಾಸೆಯ|
ನುಳಿಯೆಂ ನಾನಿನಿಯಳಾಸೆಯಂ ಕನಸಿನೊಳಂ||
ಮುಳಿದಪೆನೀ ದುರದೃಷ್ಟಕೆ |
ಮುಳಿಯೆಂನೀಂನುಡಿದನುಡಿಗೆ ಕೇಳೆಲೆಕೆಳೆಯಾ|| ೯ ||

( ಅನಂತರ ಕುಸುಮಪ್ರಭೆಯ ಪ್ರವೇಶ )

ಕುಸುಮಪ್ರಭೆ ನನ್ನಸಖಿಯಾದ ಉತ್ಪಲೆಯು ಪುಷ್ಕರೋದ್ಯಾನದಲ್ಲಿ ತನಗನುರೂಪ ನಾದ ಒಬ್ಬ ಯುವಕನನ್ನು ಕಂಡುಮೋಹಿಸಿ ತನ್ನ ಉಂಗುರವನ್ನು ಆತನಿಗೆಕೊಟ್ಟು ಆತನುಂಗುರವನ್ನು ತಾನುತೆಗೆದುಕೊಂಡು ಬಂದಿರು ವಳಂತೆ. ಈಗ ಅವಳೇ ಆತನನ್ನು ಹೇಗಾದರೂ ತನ್ನ ಅಂತಃಪುರಕ್ಕೆ ಕರೆತರಬೇಕೆಂದು ನನ್ನೊಡನೆ ಹೇಳಿ ಕಳುಹಿಸಿರುವಳು. ನಾನಾತ ನನ್ನು ಎಲ್ಲಿಹುಡುಕಲಿ ! ಆತನುಯಾರೋ ? ಹೇಗಿರುವನೋ? ತಿಳಿಯದು. ( ಎಂದುಮುಂದೆಬಂದು ) ಇಲ್ಲಿಯಾರೋ ಇಬ್ಬರು ಯುವಕರು ನಿಂತಿರುವರು. ಇವರಲ್ಲಿ ಒಬ್ಬನುಮಾತ್ರ ಸುಂದರ ನಾಗಿಯೂ ಸೌಮ್ಯನಾಗಿಯೂ ಕಾಣಿಸುವನು. ಇವನು ನನ್ನಸಖಿಯ ಹೃದಯ ಚೋರನಾಗಿರಬಹುದೆ? ಒಳ್ಳೇದು. ನಾನು ಪುರುಷ ವೇಷದಲ್ಲಿರುವದರಿಂದ ನಾನಿಂಥವಳೆಂಬುದು ತಿಳಿಯಲಾರದು.

ಈಗ ಪರೀಕ್ಷಿಸುವೆನು. (ಎಂದು ಮುಂದೆ ಬರತ್ತಾ)

ಕಂ|| ತ್ವರಿತದೊಳುದಯಿಸು ಚಂದ್ರಾ! |
ಹರಿಸದೆವೈದೋರುನೀಂಚಕೋರಿಗೆದಯೆಯಿಂ||
ಧರೆಯೊಳ್ ಕಾಣದೆನಿನ್ನಂ|
ನೆರೆಕುಂದಿದುದಕಟ! ನಳಿನಿ ವಿರಹವ್ಯಥೆಯಿಂ|| ೧೦||

ವಿಲಾಸಚಂದ್ರ (ಅದನ್ನು ಕೇಳಿ ಆಶ್ಚರ್ಯ ಸಂತೋಷಗಳಿಂದ ಸ್ವಗತಂ)ಇದೇನು? ನನ್ನನ್ನೇಸಂಬೋಧಿಸಿ ಹೇಳಿದಂತಿರುವುದು. (ಎಂದು ಕುಸುಮಪ್ರಭೆಯನ್ನು ಕಂಡು ಉತ್ಪಲೆಯ ಸಖಿಯು ವೇಷಾಂತರವನ್ನು ಧರಿಸಿ ಬಂದಿರಬಹುದೆ? (ಎಂದು ಪ್ರಕಾಶಂ) ಅಯ್ಯಾ ಚತುರನೇ ! ನೀನು ಯಾರು, ನಿನ್ನ ಹೆಸರೇನು?

ಕುಸುಮಪ್ರಭೆ ನಾನೊಬ್ಬ ವಿದೇಶಿ ನನ್ನ ಹೆಸರು ಪ್ರಸೂನಪ್ರಭ.

ವಿಲಾಸಚಂದ್ರ (ಸ್ವಗತ) ಉತ್ಪಲೆಯ ಸಖಿಗೆ ಕುಸುಮಪ್ರಭೆ ಎಂಬ ಹೆಸರು. ಪ್ರಸೂನಪ್ರಭೆಯೆಂದರೆ ಕುಸುಮಪ್ರಭೆಯೇ ಆಗಿರಬಹುದೆ?

ಕುಸುಮಪ್ರಭೆ ಅಯ್ಯಾ! ನಿನ್ನನ್ನು ನೋಡಿದರೆ ಧನಿಕನಂತೆ ಕಾಣಿಸುವೆ, ಆದ್ದರಿಂದ ನನ್ನ ಪ್ರಾರ್ಥನೆಯೊಂದನ್ನು ನೆರವೇರಿಸಿಕೊಡಲಾರೆಯಾ?

ವಿಲಾಸಚಂದ್ರ ಆಗಲಿ. ಅದು ಯಾವುದು?

ಕುಸುಮಪ್ರಭೆ ನಾನು ನಿರ್ಜರಶರ್ಮನೆಂಬ ಗುರುವಿನ ಬಳಿಯಲ್ಲಿ ಸೇವಾವೃತ್ತಿಯನ್ನು ಮಾಡಿಕೊಂಡು ವಿದ್ಯಾಭ್ಯಾಸವನ್ನು ಮಾಡಿದೆನು. ಆತನು ಈಗ ತನಗೆ ಗುರುದಕ್ಷಿಣೆಗೋಸ್ಕರ ಒಂದುಂಗುರವನ್ನು ಕೊಟ್ಟರೆ ಸಾಕೆಂದು ಹೇಳಿದನು. ಆದ್ದರಿಂದ ನೀನೊಂದುಂಗುರವನ್ನು ಕೊಡಲಾರೆಯಾ?

ವಿಲಾಸಚಂದ್ರ ಈ ಅಲ್ಪ ವಿಷಯಕ್ಕೆ ಇಷ್ಟು ಯೋಚಿಸಬೇಕೇ! ಮನೆಗೆ ನಡೆ. ನಿನ್ನ ಮನೋರಥವನ್ನು ನೆರವೇರಿಸುವೆನು.

ಕುಸುಮಪ್ರಭೆ ಅದಾಗದು ನಿನ್ನ ಬೆರಲಿನಲ್ಲಿರುವುದನ್ನೇ ಕೊಡು.

ವಿಲಾಸಚಂದ್ರ (ಸ್ವಗತ) ಈ ಮಾತುಗಳೆಲ್ಲಾ ನನಗೆ ಸಂತೋಷವನ್ನೂ ಸಂದೇಹವನ್ನೂ ಉಂಟುಮಾಡುತ್ತಿರುವುದಲ್ಲಾ. ನಿರ್ಜರಶರ್ಮನೆಂಬ ಗುರುವು ಯಾರು? ಉಂಗುರದಿಂದ ಅವನಿಗೇನು ಪ್ರಯೋಜನ. (ಎಂದು ಯೋಚಿಸುತ್ತಿರುವನು.)

ಕಾಟಿಲ್ಯಶೇಖರ ಅಯ್ಯಾ ಮಿತ್ರನೇ! ಕೊಡುವುದಕ್ಕಾಗುವದಿಲ್ಲವೆಂದು ಹೇಳು ಯೋಚನೆಯೇಕೆ?

ವಿಲಾಸಚಂದ್ರ ಅಯ್ಯಾ ವಿದೇಶಿಯೇ! ಈಯುಂಗುರವನ್ನು ಬಿಟ್ಟು ಇನ್ನೇನು ಕೇಳಿದರೂ ಕೊಡುವೆನು.

ಕುಸುಮಪ್ರಭೆ ಅಯ್ಯಾ! ಈಯುಂಗರದಿಂದ ನಿನಗೇನು ಪ್ರಯೋಜನ?

ವಿಲಾಸಚಂದ್ರ ಈಉಂಗುರದಿಂದಲೇ ನಾನಿದುವರೆಗೂ ಜೀವಿಸಿರುವುದು.

ಕುಸುಮಪ್ರಭೆ (ಸ್ವಗತ) ಹಾಗಾದರೆ ಇದು ಉತ್ಪಲೆಯ ಉಂಗುರವೇ ಆಗಿರಬಹುದು. (ಎಂದು ಪ್ರಕಾಶಂ) ನಾನದನ್ನು ನೋಡಲೂ ಕೂಡದೋ?

ವಿಲಾಸಚಂದ್ರ ಅವಶ್ಯಕವಾಗಿ ನೋಡಬಹುದು. (ಎಂದು ಕೊಡುವನು.)

ಕುಸುಮಪ್ರಭೆ (ಅದನ್ನು ನೋಡಿ ಸಂತೋಷದಿಂದ ಸ್ವಗತ) ಇದು ನನ್ನ ಸಖಿಯದು. ಇನ್ನು ನನ್ನ ಕಾರ್ಯವು ನೆರವೇರಿತು. (ಪ್ರಕಾಶಂ) ಅಯ್ಯಾ! ನೀನಿದನ್ನು ಕೊಡುವದಿಲ್ಲವೋ?

ಕಾಟಿಲ್ಯ ಎಲೋ ಮೂಢ? ಕೊಡುವದಿಲ್ಲವೆಂದು ಮೊದಲೇ ಹೇಳಲಿಲ್ಲವೆ?

ವಿಲಾಸಚಂದ್ರ ಅಯ್ಯಾ ವಿದೇಶಿಯೇ! ಖಂಡಿತವಾಗಿಯೂ ಇದನ್ನು ಕೊಡಲಾರೆ.

ಕುಸುಮಪ್ರಭೆ ಅಯ್ಯಾ! ಹಾಗಾದರೆ ನಾನು ಹೋಗುವೆನು. ಇದನ್ನು ನೀನೇ ತೆಗೆದುಕೋ (ಎಂದುಂಗುರವನ್ನು ಕೊಟ್ಟು) ಇದೊ ಈ ಪತ್ರಿಕೆಯನ್ನೂ ತೆಗೆದುಕೊ. ನಾನು ನಿನ್ನನ್ನು ಮತ್ತೊಂದು ಸಾರಿ ಬಂದು ಕಾಣುವೆನು. (ಎಂದು ಪತ್ರಿಕೆಯನ್ನು ಕೊಟ್ಟು ಹೊರಟು ಹೋಗುವಳು.)

ವಿಲಾಸಚಂದ್ರ (ಅದನ್ನೊಡೆದು ನೋಡಿ) ಇನ್ನು ನನ್ನ ಸಂತೋಷಕ್ಕೆ ಮಿತಿಯೇ ಇಲ್ಲ.

ಕಾಟಿಲ್ಯ ಅಯ್ಯಾ ಅದೇನು ಉತ್ಪಲೆಯು ಬರೆದ ಪತ್ರಿಕೆಯೋ?

ವಿಲಾಸಚಂದ್ರ ಸಂದೇಹವೇಕೆ? ಇದೊ ನೋಡು (ಎಂದು ಕೊಡುವನು.)

ಕಾಟಿಲ್ಯ (ಅದನ್ನು ತೆಗದುಕೊಂಡೋದುವನು) "ಲೋಕದಲ್ಲಿ ಚತುರರಾದ ಪುರುಷರು ಸ್ತ್ರೀಯರ ಶರೀರವು ಪರಾಧೀನವಾದುದೆಂತಲೂ ಮನಸ್ಸು ಮಾತ್ರ ಸ್ವತಂತ್ರವಾದುದೆಂತಲೂ ಮುಗ್ಧೆಯರೊಡನೆ ವಾದಿಸಿ ನಿರ್ಣಯಿಸುವರಲ್ಲವೆ. ಈಗ ಸ್ವತಂತ್ರವೆನಿಸಿಕೊಂಡಿರುವ ಅಬಲೆಯ ಮನಸ್ಸು ಪರಾಧೀನವಾಗುವದಕ್ಕೆ ಕಾರಣವೇನೋ ತಿಳಿ

ಯಲಿಲ್ಲ. ಈ ವಿಷಯವನ್ನು ಚರ್ಚಿಸಿ ತಿಳಿದುಕೊಳ್ಳಬೇಕೆಂಬ ಪೇಕ್ಷೆಯಿಂದ ಕನ್ಯಾಂತಃಪುರದ ಬಳಿಯಲ್ಲಿ ಸಂಶಯಪರಿಹಾರ ಕರ ಆಗಮನವನ್ನು ಕುತೂಹಲಾನ್ವಿತೆಯಾಗಿ ನಿರೀಕ್ಷಿಸುತ್ತಿರುವ ದಾಸಿ......ಉತ್ಪಲೆ.

ವಿಲಾಸಚಂದ್ರ ಮಿತ್ರನೇ.! ಇನ್ನು ನಾನು ಹೊರಡುವೆನು.

ಕೌಟಿಲ್ಯ (ಸ್ವಗತ) ಈ ನಾಸಿದುವರೆಗೂ ವ್ಯರ್ಥವಾಗಿ ಶ್ರಮಪಟ್ಟೆನಲ್ಲಾ ಕಡೆಗೂ ಉತ್ಪಲೆಯ ಅನುರಾಗವು ಇವನಲ್ಲಿಯೇ ಸ್ಥಿರವಾಗಿ ನೆಲ ಸಿತು. ಏನು ಮಾಡಲಿ. ಈಗ ಮಧುಮತಿಯಿಂದ ತಿರಸ್ಕೃತ ನಾಗಿರುವೆನು. ಇನ್ನು ಮುಂದೆ ಇವನಿಂದಲೂ ತಿರಸ್ಕೃತನಾದೇನು ಹೇಗಾದರೂ ಆಗಲಿ ಇನ್ನೊಂದು ಪ್ರಯತ್ನವನ್ನು ಮಾಡುವೆನು. ಅದರಿಂದ ಇವನಿಗೆ ಕೇಡುಂಟಾದರೆ ಬಹಳ ಸಂತೋಷ. ಇಲ್ಲದೆ ಒಳ್ಳೆಯದಾದರೆ ಬೇರೆ ಯೋಜನೆಯನ್ನು ಮಾಡಿ ಆ ಉತ್ಪಲೆಯನ್ನು ನಾನೇ ಹೊಂದುವೆನು.

ವಿಲಾಸಚಂದ್ರ ಮಿತ್ರನೇ! ಏನು ಯೋಚಿಸುತ್ತಿರುವೆ?

ಕೌಟಿಲ್ಯ ಅಯ್ಯಾ.! ಕನ್ಯಾಂತಃಪುರದ ಬಳಿಗೆ ಹೋಗುವೆಯಲ್ಲಾ ಅಲ್ಲಿ ಯಾರಾದರೂ ನಿನ್ನನ್ನು ಕಂಡು ಮಂತ್ರಿಗೆ ತಿಳಿಸಿದರೆ ಏನು ಮಾಡುವೆ?

ವಿಲಾಸಚಂದ್ರ ಆ ವಿಷಯದಲ್ಲಿ ನಾನೇಕೆ ಯೋಚಿಸಬೇಕು. ಆ ಉತ್ಪಲೆಯೇ ಯೋಚಿಸಿರಬಹುದು.

ಕೌಟಿಲ್ಯ ಹಾಗಾದರೆ ಈ ಮುಕ್ತಾಸರವನ್ನು ತೆಗೆದುಕೊಂಡು ಹೋಗಿ ನಿನ್ನ ಪ್ರಿಯಳಿಗೆ ಕೊಡು. (ಎಂದು ಕೊಡುವನು.)

ವಿಲಾಸಚಂದ್ರ ಅಯ್ಯಾ! ನಿನ್ನ ಉಪಕಾರಕ್ಕೆ ನಾನು ಬಹಳ ಕೃತಜ್ಞನಾಗಿರುವೆನು.

ಕೌಟಿಲ್ಯ ಇನ್ನು ನಾನು ಮಧುಮತಿಯ ಮನೆಗೆ ಹೋಗಬೇಕು. ನೀನು ನಾಳೆ ಯ ಪ್ರಾತಃಕಾಲ ನನ್ನನ್ನು ನೋಡುವೆಯಷ್ಟೆ?

ವಿಲಾಸಚಂದ್ರ ಅವಶ್ಯಕವಾಗಿ ನೋಡುವೆನು.

ಕೌಟಿಲ್ಯ. ನಾನು ಹೋಗಿಬರುವೆನು. (ಎಂದು ಹೊರಟು ಹೋಗುವನು)

ವಿಲಾಸಚಂದ್ರ. (ಮುಕ್ತಾಹಾರವನ್ನು ನೋಡಿ ಸಂತೋಷದಿಂದ) ಈ ಈಸರವು ಎಷ್ಟು ಸೊಗಸಾಗಿರುವುದು,

ಕಂ|| ಮತ್ತದ್ವಿಪಗಾಮಿನಿಜಾ |
ವೃತ್ತಸ್ತನಯುಗಳದಿಂದೆ ಬಗೆಗೊಳ್ವೆದೆಯೊಳ್ ||
ಮುತ್ತಿನಸರಮಿದ ತೊಳಕೊಳ |
ಗುತ್ತಿರೆ ಮಿಗೆನೋಡಿ ನಲಿವಕಣ್ಗಳೆಕಣ್ಗಳ್ ||೧||

ಈಗ ನಾನು ಹೋಗಿ ನನ್ನ ಕಾಂತೆಯ ವಚನಾಮೃತ ಸೇಚನೆಯಿಂದ ವಿರಹಾಗ್ನಿ ಸಂತಪ್ತವಾದ ನನ್ನ ಮನಸ್ಸನ್ನು ಶೀತಳವನ್ನಾಗಿ ಮಾಡುವೆನು. (ಎಂದು ಹೊರಟು ಹೋಗುವನು.)

(ಅನಂತರ ಶಿಲಾವರ್ಮನೆಂಬ ಯಾಮಿಕಾಧಿಪತಿಯ ಪ್ರವೇಶ)

ಶಿಲಾವರ್ಮ — ನಮ್ಮ ರಾಜಕುಮಾರನಾದ ಧೀರವರ್ಮನನ್ನು ಅಪಹರಿಸಿಕೊಂಡು ಹೋದ ಚೋರರನ್ನು ನಾಳೆಯ ಸಾಯಂಕಾಲದೊಳಗಾಗಿ ಹಿಡಿದು ತರದೆ ಇದ್ದರೆ ಮರಣ ದಂಡನೆಯನ್ನು ವಿಧಿಸುವೆನೆಂದು ಸೈನ್ಯಾಧಿಪತಿಯಾದ ಅರಾತಿಸಿಂಹನ ಆಜ್ಞೆಯಾಗಿರುವುದು. ಈಗ ಎಷ್ಟು ಹುಡುಕಿದರೂ ಚೋರರು ಬೇರೆ ಸಿಕ್ಕಲಿಲ್ಲ. ಅಹಾ! ಲೋಕದಲ್ಲಿ ಯಾಮಿಕಾಧಿಪತ್ಯವು ಬಹು ಕಷ್ಟಕರವಾದದ್ದು. ದುಷ್ಟರನ್ನು ಕಂಡು ಹಿಡಿದು ಶಿಕ್ಷೆಗೆ ಗುರಿಮಾಡಿಸುತ್ತಾ ರಾತ್ರಿಹಗಲೂ ತಿರುಗಿ ತಿರುಗಿ ನಿದ್ರಾಹಾರಂಗಳಿಲ್ಲದೆ ಮಳೆ ಬಿಸಿಲುಗಳನ್ನು ಲಕ್ಷಿಸದೆ ಕಾರ್ಯಾಸಕ್ತನಾಗಿದ್ದರೂ ಅಜಾಗರೂಕನೆಂಬ ಅಪಯಶಸ್ಸು ನನ್ನನ್ನು ಬಿಡಲಿಲ್ಲವಲ್ಲ. ಈಗೇನು ಮಾಡಲಿ. (ಎಂದು ತಿರುಗಿ ನೋಡಿ) ಇದೊ ಕಾರ್ಯದಕ್ಷನೆನಿಸಿಕೊಂಡು ಜನರ ಪ್ರೀತಿಗೆ ಪಾತ್ರನಾಗಿರುವ ಭೀಷಣಕನು ಯಾರನ್ನೋ ಹಿಡಿದುಕೊಂಡು ಬರುತ್ತಿರುವನು.

(ಅನಂತರ ಭೀಷಣಕನೆಂಬ ಯಾಮಿಕನು ವಿಲಾಸಚಂದ್ರನೊಡನೆ ಪ್ರವೇಶಿಸುವನು.)

ಶಿಲಾವರ್ಮ — ಅಪ್ಪಾ ಭೀಷಣಕನೆ! ಇವನು ಯಾರು?

ಭೀಷಣಕ — ಸ್ವಾಮಿ! ಈತನು ಯಾರೋ ನನಗೆ ತಿಳಿಯದು. ಈ ಮುಕ್ತಾ ಸರವನ್ನು ತೆಗೆದುಕೊಂಡು ಹೋಗುತ್ತಿದ್ದನು. ಇದಿರಾಗಿ ನಾನು ಬರಲು ನನ್ನನ್ನು ಕಂಡೊಡನೆಯೇ ಇವನು ಮರೆಮಾಡಿಕೊಂಡು ನದೀತೀರದ ಕಡೆ ಹೊರಟು ಹೋದನು. ಆಗ ನನಗೆ ಸಂಶಯ ಉಂಟಾದ್ದರಿಂದ ಹಿಡಿದು ತಂದಿರುವೆನು.

ಶಿಲಾವರ್ಮ ಅಯ್ಯಾ! ನೀನು ಯಾರು?

ವಿಲಾಸಚಂದ್ರ ನಾನಿಂಥವನೆಂದು ತಿಳಿದುದರಿಂದ ನಿನಗಾಗಬೇಕಾದ ಫಲವೇನು?

ಶಿಲಾವರ್ಮ ಅಯ್ಯಾ! ಹಾಗಲ್ಲ. ನೀನಿವನನ್ನು ಕಂಡು ಹಾರವನ್ನೇಕೆ ಮರೆ ಮಾಡಿದೆ ?

ವಿಲಾಸಚಂದ್ರ ನನ್ನ ಹಾರವನ್ನು ನನಗೆ ತೋರಿದಂತೆ ಮಾಡಬಹುದಲ್ಲವೆ?

ಶಿಲಾವರ್ಮ ಈ ಹಾರವು ನಿನ್ನದೆಂದು ನಂಬುವುದು ಹೇಗೆ?

ವಿಲಾಸಚಂದ್ರ ನೀನಿದನ್ನು ನಂಬಲಾರದಿದ್ದರೆ ಸೂರ್ಯನಿಂದ ಬೆಳಕು ಉಂಟಾಗುವುದನ್ನೂ ನಂಬಲಾರೆ.

ಶಿಲಾವರ್ಮ ನಿನ್ನ ಮಾತುಗಳಿಂದ ನಮಗೆ ಪ್ರಯೋಜನವಿಲ್ಲ. ಈ ಸರವನ್ನು ನಮ್ಮ ಸೈನ್ಯಾಧಿಪತಿಗೆ ತೋರಿಸಿ ತೆಗೆದುಕೊಂಡು ಬರುವ ತನಕ ನೀನಿಲ್ಲಿಯೇ ಇರಬೇಕು.

ವಿಲಾಸಚಂದ್ರ ಆಗಬಹುದು.

ಶಿಲಾವರ್ಮ ಅಯ್ಯಾ ಭೀಷಣಕನೆ! ನೀನೀತನನ್ನು ಜಾಗರೂಕನಾಗಿ ನೋಡಿಕೊಳ್ಳುತ್ತಿರು. ನಾನು ಹೋಗಿ ಅರಾತಿಸಿಂಹನಿಗೆ ಈ ಸರವನ್ನು ತೋರಿಸಿ ಶೀಘ್ರ ಬರುವೆನು. (ಎಂದು ಹೊರಟು ಹೋಗುವನು.)

ವಿಲಾಸಚಂದ್ರ ಅಯ್ಯೋ ವಿಧಿಯೇ! ನನ್ನ ಮನೋರಥಕ್ಕೆ ಪದೇ ಪದೇ ವಿಘ್ನಗಳೇ ಸಂಭವಿಸುತ್ತಿರುವದಲ್ಲಾ. ಏನು ಮಾಡಲಿ (ಎಂದು ಭೀಷಣಕನ ಕಡೆ ತಿರುಗಿ) ಅಯ್ಯಾ ನಾನು ಕಾರ್ಯಾರ್ಥಿಯಾಗಿ ಹೊರಟಿರುವುದರಿಂದ ಬಹು ಕಾಲ ಇಲ್ಲಿ ನಿಲ್ಲಲಾರೆನು. ಆ ಸರವನ್ನು ನಿಮ್ಮ ಅಧಿಪತಿಯು ತರುವವರೆಗೂ ಸಾವಕಾಶಮಾಡಿದರೆ ನನ್ನ ಕಾರ್ಯವು ಕೆಟ್ಟು ಹೋದೀತು ಆದ್ದರಿಂದ ನಡೆ. ನಾನೂ ಸೈನ್ಯಾಧಿಪತಿಯ ಬಳಿಗೆ ಬರುವೆನು.

ಭೀಷಣಕ ಅಯ್ಯಾ! ಇದೊ ನಮ್ಮಧಿಪತಿಯೇ ಬರುತ್ತಿರುವನು.

(ಅನಂತರ ಶಿಲಾವರ್ಮನ ಪ್ರವೇಶ)

ಶಿಲಾವರ್ಮ ಅಯ್ಯಾ! ಆ ಮುಕ್ತಾಸರವು ರಾಜಕುಮಾರನ ಕಂಠದಲ್ಲಿದ್ದುದೆಂದು ವಿಶದವಾಯಿತು. ಆದ್ದರಿಂದ ನೀನು ಬಂದಿಯಾಗಿರುವೆ.

ವಿಲಾಸಚಂದ್ರ ಏನು! ಅದು ರಾಜಕುಮಾರನದೆ?

ಶಿಲಾವರ್ಮ ಅಹುದು.

ವಿಲಾಸಚಂದ್ರ ಈಗ ನಾನೇನು ಮಾಡಬೇಕು?

ಶಿಲಾವರ್ಮ ಸೆರೆಮನೆಗೆ ನಡೆ.

ವಿಲಾಸಚಂದ್ರ ಅದೇಕೆ?

ಶಿಲಾವರ್ಮ ನಿನ್ನ ವಿಚಾರಣೆಯಾಗಬೇಕಾಗಿರುವುದು.

ವಿಲಾಸಚಂದ್ರ ಯಾವ ವಿಷಯದಲ್ಲಿ?

ಶಿಲಾವರ್ಮ ನೀನೇ ಚೋರನೆಂದು ನಿರ್ಧರಿಸುವ ವಿಷಯದಲ್ಲಿ.

ವಿಲಾಸಚಂದ್ರ ನೀನಿದನ್ನು ನಿರ್ಧರಿಸಬಲ್ಲೆಯೊ?

ಶಿಲಾವರ್ಮ ಆ ಸರವೇ ನಿರ್ಧರಿಸಬಲ್ಲದು. ಎಲೈ ಭೀಷಣಕನೆ! ಇವನನ್ನು ಸೆರೆ ಮನೆಗೆ ಕರೆದುಕೊಂಡು ನಡೆ.

ವಿಲಾಸಚಂದ್ರ (ನಿಟ್ಟುಸಿರು ಬಿಟ್ಟು) ಆಃ! ನನಗೆ ಸ್ವಪ್ನಗಳುಂಟಾಗುತ್ತಿರುವುದೊ? ಇಲ್ಲ. ಕಣ್ಣುಬಿಟ್ಟುಕೊಂಡೇ ಇರುವುದರಿಂದ ನಿದ್ರಿತನಾಗದೆ ಸ್ವಪ್ನವನ್ನು ಕಾಣುವುದು ಅಸಂಭವ. ಇದೆಲ್ಲಾ ನಿಶ್ಚಯವಾಗಿಯೇ ಇರಬಹುದೆ? ಅಯ್ಯೊ ಅದೃಷ್ಟವೆ! ಆ ದಿನ ಪ್ರಿಯಳೊಡನೆ ಸುಖ ಸಲ್ಲಾಪವನ್ನು ಮಾಡುತ್ತಿದ್ದರೆ ಆ ಸಖಿಯರು ವಿಘ್ನವಾಗಿ ಬಂದರು ತಿರುಗಿ ವನದಲ್ಲಿ ಆಕೆಯ ಸಮಾಗವನ್ನು ಹೊಂದಬೇಕೆಂದು ಹೋದರೆ ಯಾವನೋ ಘಾತುಕನು ನನ್ನನ್ನು ಹೊಡೆದು ಕೆಡವಿ ದನು. ಈ ದಿನವಾದರೋ ಈ ಮುಕ್ತಾಸರವೇ ವಿಘ್ನವಾಗಿ ಪರಿಣಮಿಸಿತು. ಆಃ! ಈಗೇನು ಮಾಡಲಿ?

ವಿಭೀಷಣಕ ಅಯ್ಯಾ! ಸಾವಕಾಶ ಮಾಡಬೇಡ ಜಾಗ್ರತೆಯಾಗಿ ನಡೆ.

ವಿಲಾಸಚಂದ್ರ (ದುಃಖದಿಂದ)

ಕಂ|| ಮನದೊಳ್ ಮೂಡಿದರಾಗದೆ |
ಮನದನ್ನೆಯನೈದೆಸಾರ್ದುಃಬಿನದಿಸಲೆಂದಾಂ||
ಅನುವಿಂದೈತರೆ ವಿಧಿಸಂ |
ಜನಿಯಿಸಿದುದಸಾಧ್ಯವಿಘ್ನಮಂ ತಾನಕಟಾ || ೧೨ ||

ದೈವಾಜ್ಞೆಯಿದ್ದಂತಾಗಲಿ (ಎಂದು ಭೀಷಣಕನೊಡನೆ ಹೊರಟು ಹೋಗುವನು.)

|| ತೃತೀಯಾಂಕಂ ಸಮಾಪ್ತಂ.||

||ಚತುರ್ಥಾಂಕಂ||

—:೦:—

(ಅನಂತರ ಮಧುಮತಿಯ ಪ್ರವೇಶ.)

ಮಧುಮತಿ ಕಂ|| ಕೃತಮುನಿ ಚಿತ್ತಸ್ಖಲನಃ! |
ಶ್ರಿತಗಣಿಕಾ ನಿವಹ ಸರಸ ವಚನಾಧೀನಃ! |
ಕ್ಷಿತಿಯುವಕ ಸ್ತುತಿ ಭಾಜನ! |
ನತಿಸುವೆ ನಾನೊಲ್ದು ಮದನ! ಮಾನಸ ಸದನಃ!|| ೧||

ಎಲೈ ಮಾನಿನೀಮಾನಾಪಹಾರಿಯಾದ ಮನ್ಮಥನೆ! ನಿನ್ನ ದಯೆಯಿಂದಲೇ ನಮ್ಮ ಬೀದಿಯು ಲಕ್ಷ್ಮೀದೇವಿಗಾವಾಸವಾಗಿರುವುದು. ನಾನು ಸುಪ್ರಸಿದ್ಧಳಾಗಿರುವುದೂ ನಿನ್ನ ದಯೆಯಿಂದಲೇ ಅಲ್ಲವೆ. ನಿನ್ನ ಸಹಾಯದಿಂದ ನಾನು ಅನೇಕ ಜನ ಧನಿಕರನ್ನು ದರಿದ್ರರನ್ನಾಗಿಯೂ ಯುವಕರನ್ನು ವೃದ್ಧರನ್ನಾಗಿಯೂ ಮೂರ್ಖರನ್ನು ರಸಿಕರನ್ನಾಗಿಯೂ ಸಜ್ಜನರನ್ನು ದುಷ್ಟರನ್ನಾಗಿಯೂ ಸತ್ಯವಾದಿಗಳನ್ನು ಅಸತ್ಯಶೀಲರನ್ನಾಗಿಯೂ ಮಾಡಿರುವೆನು. ಇದೂ ಅಲ್ಲದೆ ನಿನ್ನ ಮಹಿಮೆಯಿಂದ ಲೋಕದಲ್ಲಿ ಅನೇಕ ಗೌರವಸ್ಥರು ಅಪಯಶಸ್ಸಿಗೆ ಗುರಿಯಾಗಿರುವರು. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ನಿನ್ನ ಅನುಗ್ರಹದಿಂದ ಅನೇಕ ವಿಧವಾದ ಅನಾಹುತಗಳು ಸಂಭವಿಸುತ್ತಲೇ ಇರುವುವು. ನೀನು ಮಾಡುವ ಸಹಾಯದಿಂದ ಅನೇಕ ಜನ ಅಪ್ರಯೋಜಕರು ಅಧಿಕಾರಿಗಳಾಗಿರುವರು. ಎಲೈ ಪಂಚಬಾಣನೆ! ನಿನ್ನ ಸಾಹಸದಿಂದ ಯಾವ ಕೃತ್ಯವು ತಾನೆ ನಡೆಯಲಾರದು. ರುಕ್ಮಿಣೀದೇವಿಯ ವ್ಯಾಜದಿಂದ ಶಿಶುಪಾಲನಿಗೆ ಶಿವಪದವನ್ನೇ ಹೊಂದಿಸಿದೆ. ಕನಕಲತೆಯ ವ್ಯಾಜದಿಂದ ಮಧೂಲಕನನ್ನು ಮೌನಿಯನ್ನಾಗಿ ಮಾಡಿದೆ. ನಿರುಪಮೆಯ ನೆವದಿಂದ ಸಾಹಸಿಯಾದ ಸಂತಾಪಕನನ್ನು ಸನ್ಯಸ್ತನನ್ನಾಗಿ ಮಾಡಿದೆ. ಈಗ ಕೌಟಿಲ್ಯ ಶೇಖರನನ್ನು ಕಳ್ಳನನ್ನಾಗಿ ಮಾಡಿರುವೆ. ಇಂಥಾ ನಿನ್ನನ್ನು ದೇವತೆಗಳೇ

ಕೊಂಡಾಡುತ್ತಿರುವಾಗ ಅಬಲೆಯಾದ ನಾನು ಸ್ತೋತ್ರ ಮಾಡದಿದ್ದರೆ ನನ್ನ ಗತಿ ಏನಾದೀತು? (ಎಂದು ತಿರುಗಿ ನೋಡಿ) ಇದೊ ಆ ನಾಯಿಯು ಇತ್ತ ಕಡೆಯೇ ಬರುತ್ತಿರ ವುದು. ನನ್ನ ಮನೆಗೆ ಬರಬೇಡವೆಂದು ನಾನೆಷ್ಟು ಹೇಳಿದರೂ ಇವನು ಕೇಳುವದಿಲ್ಲವಲ್ಲ ಏನು ಮಾಡಲಿ?

(ಅನಂತರ ಕೌಟಿಲ್ಯಶೇಖರನ ಪ್ರವೇಶ)

ಕೌಟಿಲ್ಯ ಪ್ರಿಯೇ ಮಧುಮತಿ! ಮಧುಮತಿ!

ಮಧುಮತಿ ಮಧುಮತಿಯಿಂದೇನಾಗಬೇಕು?

ಕೌಟಿಲ್ಯ ಪ್ರಿಯೆ! ಇದೇಕೆ ಕೋಪಮಾಡಿಕೊಳ್ಳುವೆ ?

ಮಧುಮತಿ ಕೋಪವು ಯಾರಿಗೆ?

ಕೌಟಿಲ್ಯ ಹಾಗಾದರೆ ನಿನಗೆ ಕೋಪವಿಲ್ಲವಷ್ಟೆ?

ಮಧುಮತಿ ನಾನು ಕೋಪಿಸಿಕೊಂಡರೆ ನಿನಗಾಗುವುದೇನು?

ಕೌಟಿಲ್ಯ ನಿನಗೆ ಕೋಪ ಉಂಟಾದರೆ ನನ್ನ ಪ್ರಾಣವೇ ಹಾರಿಹೋಗುವಂತಾಗುವುದು.

ಮಧುಮತಿ ನಾನು ಸಂತೋಷವಾಗಿ ನಗುತ್ತಿದ್ದರೊ

ಕೌಟಿಲ್ಯ (ಸಂತೋಷದಿಂದ ನಗುತ್ತಾ) ಸ್ವರ್ಗ ಸೌಖ್ಯವೇ ಕರಗತವಾದಂತಲ್ಲವೆ?

ಮಧುಮತಿ ನಾನು ದುಃಖ ಪಡುತ್ತಿದ್ದರೊ?

ಕೌಟಿಲ್ಯ ನಿನ್ನ ದುಃಖಕ್ಕೆ ಕಾರಣವನ್ನು ತಿಳಿದು ಅದನ್ನು ಪರಿಹರಿಸುವೆನು. ಅಸಾಧ್ಯವಾದರೆ ನನ್ನ ಪ್ರಾಣವನ್ನೇ ಬಿಡುವೆನು.

ಮಧುಮತಿ ಇದು ಮಾತ್ರ ನಂಬುತಕ್ಕುದಲ್ಲ.

ಕೌಟಿಲ್ಯ ಅದೇಕೆ?

ಮಧುಮತಿ ಪುರುಷರ ಮನಸ್ಸು ಕಠಿನತರವಾದದ್ದು.

ಕೌಟಿಲ್ಯ ಪ್ರಿಯೆ! ನಿನ ವಿಷಯದಲ್ಲಿ ಯಾವ ಪುರುಷನು ತಾನೇ ಕಠಿನ ಹೃದಯನಾದಾನು?

ಮಧುಮತಿ ನಿನ್ನ ಮಿತ್ರನಾದ ವಿಲಾಸಚಂದ್ರನೇ ಇದಕ್ಕೆ ನಿದರ್ಶನವಲ್ಲವೆ? „ಅವಿವಾಹಿತನಾಗಿಯೇ ಇರುವುದಾಗಿಯೂ, ತನ್ನ ಐಶ್ವರ್ಯವನ್ನೆಲಾ ನನಗೆ ಕೊಟ್ಟು ಬಿಡುವುದಾಗಿಯೂ" ಹೇಳುತ್ತಿದ್ದು ಈಗ ಯಾವ ಳೋ ಒಬ್ಬ ನನ್ನ ಸವತಿಯನ್ನು ಕಂಡು ಬೆರಗಾಗಿ ನನ್ನ ಹೆಸ

ರನ್ನೇ ಮರೆತಿರುವನು.

ಕೌಟಿಲ್ಯ ಹಾಗಾದರೆ ನನ್ನ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?

ಮಧುಮತಿ ಅವನಿಗೆ ಮಿತ್ರನಲ್ಲವೆ! ಆದ್ದರಿಂದ ಅವನಂತೆಯೋ ನೀನು.

ಕೌಟಿಲ್ಯ ಹಾಗಾದರೆ ಲೋಕದಲ್ಲಿ ವೇಶ್ಯೆಯರೇ ಸರಳಹೃದಯೆಯರಲ್ಲವೆ!

ಮಧುಮತಿ ಹಾಗೆ ಹೇಳುವುದಕ್ಕೆ ಅನುಮಾನವೇನು ?

ಕೌಟಿಲ್ಯ ಪ್ರಿಯೆ! ಈ ಮಾತಿನಿಂದೇನು ಫಲ. ನಡೆ ಒಳಗೆ ಹೋಗೋಣ

ಮಧುಮತಿ ನಾನು ಒಳಕ್ಕೆ ಬರುವುದಿಲ್ಲ. ನಮ್ಮ ಸೋದರತ್ತೆಯ ಮಗಳಾದ ಮದನಮಂಜರಿಯು ಬರುವುದಾಗಿ ಹೇಳಿ ಕಳುಹಿಸಿರುವಳು ಆದ್ದರಿಂದ ನಾನಿಲ್ಲಿಯೇ ಅವಳನ್ನು ನಿರೀಕ್ಷಿಸುತ್ತಿರುವೆನು.

ಕೌಟಿಲ್ಯ (ಸ್ವಗತ) ಇವಳಿಗೆ ನನ್ನಲ್ಲಿ ಅನುರಾಗವು ತಪ್ಪಿತು. ಆದ್ದರಿಂದ ಕಾರಣಾಂತರವನ್ನು ಕಲ್ಪಿಸಿ ಹೇಳುತ್ತಾ ಪ್ರತಿ ದಿನವೂ ನನ್ನ ಉತ್ಸಾಹಕ್ಕೆ ಭಂಗವನ್ನುಂಟು ಮಾಡುತ್ತಿರುವಳು. ಈಗೇನು ಮಾಡಲಿ ದ್ರವ್ಯಾಸೆಯಿಂದ ಇವಳನ್ನು ವಶಮಾಡಿಕೊಳ್ಳುವೆನೆಂದರೆ ನನ್ನ ಐಶ್ವರ್ಯವನ್ನೆಲ್ಲಾ ಇವಳೇ ಸೂರೆಗೊಂಡಳು. ರಾಜಕುಮಾರನ ಆಭರಣಗಳನ್ನು ತಂದು ಕೊಟ್ಟರೆ ಅದು ಕಳ್ಳತನದಿಂದ ತಂದುದೆಂದು ತಿಳಿದು ತಿರಸ್ಕರಿಸಿದಳು. ವಿಲಾಸಚಂದ್ರನ ಐಶ್ವರ್ಯವನ್ನೆಲ್ಲಾ ಇವಳಿಗೆ ಮೊದಲೇ ಕೊಡಿಸಿದುದಾಯಿತು. ಇನ್ನು ಇವಳಾಸೆಯನ್ನೇ ತೊರೆದು ಬಿಡುವೆನು.

ಮಧುಮತಿ ಇಲ್ಲಿ ಸುಮ್ಮನೇಕೆ ನಿಂತಿರುವೆ? ಒಳಗೆ ಹೋಗಿ ವಿಶ್ರಮಿಸಿಕೊ.

ಕೌಟಿಲ್ಯ ನನಗೆ ಬೇರೆ ಕಾರ್ಯ ವಿರುವುದರಿಂದ ಹೋಗುವೆನು

ಮಧುಮತಿ ಹಾಗಾದರೆ ನಡೆ. (ಎಂದು ತೆರೆಯಕಡೆ ತಿರುಗಿ ನೋಡಿ) ಇದೇನು ಶಿಲಾವರ್ಮನೂ ಭೀಷಣಕನೂ ನನ್ನ ಮನೆಗೆ ಬರುತ್ತಿರುವರು!

ಕೌಟಿಲ್ಯ (ಸ್ವಗತ) ಇವರಿಬ್ಬರನ್ನೂ ಕಂಡರೆ ನನಗೂ ಬಹಳ ಭಯವಾಗುವುದಲ್ಲಾ. ಇವರಿಲ್ಲಿಗೇಕೆ ಬಂದರು !

(ಅನಂತರ ಶಿಲಾವರ್ಮ ಭೀಷಣಕರೆಂಬ ಯಾಮಿಕರು ಪ್ರವೇಶಿಸುವರು.)

ಶಿಲಾವರ್ಮ ಮಧುಮತಿ! ನಿನ್ನನ್ನು ಕರೆತರಬೇಕೆಂದು ನ್ಯಾಯಾಧಿಪತಿಯ ಆಜ್ಞೆಯಾಗಿರುವುದು.

ಮಧುಮತಿ ನನ್ನನ್ನು ಕರೆತರಬೇಕೆಂದೇ ?

ಶಿಲಾವರ್ಮ ಅಹುದು. ನಿನ್ನನ್ನೂ ಕೌಟಿಲ್ಯಶೇಖರನೆಂಬುವನನ್ನೂ ಇಬ್ಬರನ್ನೂ ಕರೆತರುವಂತೆ ನನಗೆ ತಿಳಿಸಿರುವರು.

ಮಧುಮತಿ (ಸ್ವಗತ) ಅಯ್ಯೊ! ಇನ್ನೇನು ಗತಿ. ಈ ನೀಚನಾದ ಕೌಟಿಲ್ಯಶೇಖರನು ಏನು ಮಾಡಿರುವನೊ! ತಿಳಿಯದಲ್ಲ. ನ್ಯಾಯಸ್ಥಾನಕ್ಕೆ ಹೋದರೆ ನನ್ನ ಗೌರವಕ್ಕೆ ನ್ಯೂನತೆಯುಂಟಾಗುವುದಲ್ಲ. ಏನು ಮಾಡಲಿ?

ಭೀಷಣಕ ಅಯ್ಯಾ ಶಿಲಾವರ್ಮನೆ! ಇದೊ ಕೌಟಿಲ್ಯ ಶೇಖರನಿಲ್ಲಿಯೇ ಇರುವನು.

ಶಿಲಾವರ್ಮ ಈತನೆ ಆ ಕೌಟಿಲ್ಯಶೇಖರನೊ? (ಎಂದು ಕೌಟಿಲ್ಯನೊಡನೆ) ಅಯ್ಯಾ! ನಡೆ. ನಿನ್ನನ್ನು ನ್ಯಾಯಾಧಿಪತಿಯು ಅಪೇಕ್ಷಿಸಿದನು.

ಕೌಟಿಲ್ಯ ನನ್ನನ್ನು ಕರೆಯಿಸುವುದಕ್ಕೆ ಕಾರಣವೇನು?

ಶಿಲಾವರ್ಮ ಅದರ ಕಾರಣವನ್ನು ನಾವು ತಿಳಿಸಬೇಕಾದ ಅವಶ್ಯಕತೆ ಇಲ್ಲ. ನಡೆ.

ಮಧುಮತಿ (ಸ್ವಗತ) ಅಯ್ಯೊ! ನನ್ನ ಅವಸ್ಥೆ ಏನಾಗುವುದೊ ತಿಳಿಯದಲ್ಲಾ (ಎಂದು ಪ್ರಕಾಶ) ಅಯ್ಯಾ! ನಮ್ಮ ತಾಯಿಯು ಬರುವವರೆಗೂ ಅವಕಾಶವನ್ನು ಕೊಡಲಾರೆಯಾ?

ಶಿಲಾವರ್ಮ ಆದಾಗದು. ಜಾಗ್ರತೆಯಾಗಿ ನಡೆ. (ಎಂದು ಭೀಷಣಕನೊಡನೆ ಮಧುಮತಿಯನ್ನೂ ಕೌಟಿಲ್ಯಶೇಖರನನ್ನು ಕರೆದುಕೊಂಡು ಹೊರಟು ಹೋಗುವನು)

(ಅನಂತರ ಕಾಯಸ್ಥನೊಡನೆ ನ್ಯಾಯಾಧಿಪತಿಯಾದ ಸಮರ್ಥಕನೂ ಅರಾತಿಸಿಂಹನೂ ವಿಲಾಸಚಂದ್ರನೂ ಪ್ರವೇಶಿಸುವರು.)

ಸಮರ್ಥಕ ಅಯ್ಯಾ ವಿಲಾಸಚಂದ್ರನೆ! ಕಳ್ಳತನವನ್ನು ಮಾಡುವುದರಿಂದ ಪಾಪ ಸಂಘಟನೆಯಾಗುವುದೆಂದು ತಿಳಿದಿದೆಯಲ್ಲವೆ? ಈ ದೋಷದೊಡನೆ ಅಸತ್ಯವನ್ನು ಹೇಳಿ ಮತ್ತೊಂದು ದೋಷವನ್ನು ಸುಲಭವಾಗಿ ಸಂಪಾದಿಸಿಕೊಳ್ಳುವೆಯಾ?

ವಿಲಾಸಚಂದ್ರ ನಾನೆಂದಿಗೂ ಅಸತ್ಯವನ್ನಾಡತಕ್ಕವನಲ್ಲ. ಈಗ ನಾನು ಹೇಳಿರುವ ವಿಷಯಗಳನ್ನೆಲ್ಲಾ ಕೌಟಿಲ್ಯಶೇಖರನೂ ಮಧುಮತಿಯೂ ಬಂದನಂತರ ವಿಮರ್ಶೆ ಮಾಡಬಹುದು.

ಅರಾತಿಸಿಂಹ — ಕೌಟಿಲ್ಯಶೇಖರನು ಈ ಸರವನ್ನು ತಾನು ಕೊಡಲಿಲ್ಲವೆಂದು ಹೇಳಿದರೆ ಆಗ ನೀನೇನು ಮಾಡುವೆ!

ವಿಲಾಸಚಂದ್ರ — ಮಿತ್ರನಾದ ಕೌಟಿಲ್ಯಶೇಖರನು ಎಂದಿಗೂ ಮಿಥ್ಯಾವಾದಿಯಲ್ಲ. ಯಥಾರ್ಥವನ್ನೇ ಹೇಳುವನು.

(ಅನಂತರ ಶಿಲಾವರ್ಮ ಭೀಷಣಕರೊಡನೆ ಮಧುಮತೀ ಕೌಟಿಲ್ಯಶೇಖರರ ಪ್ರವೇಶ)

ಕೌಟಿಲ್ಯ — ನ್ಯಾಯನಿರ್ಣೇತರಿಗೆ ಅಭಿವಂದಿಸುವೆನು.

ಸಮರ್ಥಕ — ಅಯ್ಯಾ! ಕೌಟಿಲ್ಯಶೇಖರನೆಂಬುವನು ನೀನೆಯೊ?

ಕೌಟಿಲ್ಯ — ಅಹುದು.

ಕಾಯಸ್ಥ — ಅಯ್ಯಾ! ಮಧುಮತಿ ಎಂಬ ವೇಶ್ಯೆಯು ಇವಳೇ ಅಲ್ಲವೆ?

ಕೌಟಿಲ್ಯ — ಅಹುದು.

ಕಾಯಸ್ಥ — ಈಕೆಗೂ ನಿನಗ ಪರಿಚಯವಿರುವುದೊ?

ಕೌಟಿಲ್ಯ — ವ್ಯವಹಾರಸ್ಥಾನದಲ್ಲಿ ಈ ಪ್ರಸ್ತಾಪವು ಲಜ್ಜಾಸ್ಪದವಲ್ಲವೆ?

ಸಮರ್ಥಕ — ಅಯ್ಯಾ ಲಜ್ಜೆಯೇಕೆ? ಘೋರ ಕೃತ್ಯಗಳೂ ದುಃಖಕರವಾದ ವಿಷಯಗಳೂ, ಲಜ್ಜಾಸ್ಪದವಾದ ವಿಷಯಗಳೂ ವ್ಯವಹಾರಸ್ಥಾನದಲ್ಲಿ ಪದೇ ಪದೇ ವಿಚಾರಣೀಯಗಳಾಗಿರುತ್ತವೆ. ಆದ್ದರಿಂದ ಲಜ್ಜೆ ಏಕೆ? ನಿನಗೀಕೆಯು ಸ್ನೇಹವಿರುವುದೋ ಇಲ್ಲವೋ ಹೇಳು.

ಕೌಟಿಲ್ಯ — ಇರುವುದು.

ಸಮರ್ಥಕ — ಮಧುಮತಿ! ಈತನು ಹೇಳುವ ಮಾತು ನಿಜವೋ?

ಮಧುಮತಿ — (ತಲೆಬಾಗಿ) ಕೆಲವು ಪುರುಷರು ತಮ್ಮ ಐಶ್ವರ್ಯೌದಾರ್ಯ ಯವ್ವನಾದಿಗಳ ಪ್ರದರ್ಶನಾರ್ಥವಾಗಿ ಹೀಗೆ ಹೇಳುವುದುಂಟಲ್ಲವೆ?

ಸಮರ್ಥಕ — ಆದರೆ ನೀನೀತನನ್ನು ಕಾಣೆಯೊ?

ಮಧುಮತಿ — ಈಗತಾನೆ ನಮ್ಮ ಮನೆಗೆ ಬಂದನು. ಅಷ್ಟು ಮಾತ್ರಬಲ್ಲೆ.

ಸಮರ್ಥಕ — ಅಯ್ಯಾ ಕೌಟಿಲ್ಯಶೇಖರನೆ! ಈ ಹಾರವನ್ನು ಬಲ್ಲೆಯಾ ನೋಡು. (ಎಂದು ಕೊಡುವನು.)

ಕೌಟಿಲಶೇಖರ. (ಅದನು ತೆಗೆದುಕೊಂಡು ನೋಡಿ)ಇದುವರೆಗೂ ನಾನಿದನ್ನೆಲ್ಲಿಯೂ ನೋಡಿರಲಿಲ್ಲ )

ಕಾಯಸ್ಥ. ಅಯ್ಯಾ ! ಚೆನ್ನಾಗಿನೋಡು.

ಕೌಟಿಲ್ಯ — ಎಷ್ಟು ನೋಡಿದರೂ ನನಗಿದು ಹೊಸದೆಂದೇ ತೋರುವುದು.

ವಿಲಾಸಚಂದ್ರ — ಅಯ್ಯಾ! ಇದು (ಎಂದು ಮಾತಾಡುವುದರೊಳಗಾಗಿ)

ಅರಾತಿಸಿಂಹ — ಈಗ ನೀನು ಮಾತಾಡಕೂಡದು. (ಎಂದು ನಿರೋಧಿಸುವನು)

ಸಮರ್ಥಕ — ಈ ಹಾರವು ನಿನ್ನ ಸಮೀಪದಲ್ಲಿದ್ದ ಮುಕ್ತಾಹಾರದಂತೆಯೇ ಕಾಣಿಸುವುದಲ್ಲವೆ?

ಕೌಟಿಲ್ಯ — ನನ್ನ ಸಮೀಪದಲ್ಲಿ ಮುಕ್ತಾಹಾರವೆಲ್ಲಿರುವುದು?

ಸಮರ್ಥಕ — ಪೂರ್ವದಲ್ಲಿ ನೀನು ಧರಿಸಿಕೊಳ್ಳುತಿದ್ದೆಯಲ್ಲವೆ?

ಕೌಟಿಲ್ಯ — ಅದು ಬಹಳ ದಿನಗಳ ಹಿಂದೆಯೇ ಹೋಯಿತು.

ಸಮರ್ಥಕ — ಅಯ್ಯಾ ಕೌಟಿಲ್ಯಶೇಖರನೆ! ಈ ವಿಲಾಸಚಂದ್ರನಿಗೆ ನೀನು ಕೊಟ್ಟಿರುವ ಮುಕ್ತಾಸರವೂ ಇದರಂತೆಯೇ ಇಲ್ಲವೆ?

ಕೌಟಿಲ್ಯ — ವಿಲಾಸಚಂದ್ರನು ಯಾರು?

ಸಮರ್ಥಕ — ಇದೊ ಅಲ್ಲಿ ನಿಂತಿರುವವನು. ನಿನ್ನ ಮಿತ್ರ.

ಕೌಟಿಲ್ಯ — ನನ್ನ ಮಿತ್ರನೆಂದರೇನು? ಆತನು ಯಾರೋ ನನಗೆ ತಿಳಿಯದು.

ವಿಲಾಸಚಂದ್ರ — (ಕೋಪದಿಂದ) ಎಲಾ ಕೌಟಿಲ್ಯನೆ! (ಎಂದು ಮಾತನಾಡುವುದರೊಳಗಾಗಿ ಶಿಲಾವರ್ಮನು ನಿರೋಧಿಸುವನು)

ಸಮರ್ಥಕ — ವಿಲಾಸಚಂದ್ರನಿಗೂ ನಿನಗೂ ಸ್ನೇಹವಿಲ್ಲವೆ?

ಕೌಟಿಲ್ಯ — ಸ್ನೇಹವೂ ಇಲ್ಲ. ನನ್ನ ಬಳಿಯಲ್ಲಿ ಹಾರವೂ ಇಲ್ಲ. ನಾನವನಿಗೆ ಕೊಡಲೂ ಇಲ್ಲ.

ಸಮರ್ಥಕ — ಮಧುಮತಿ! ಈ ಹಾರವು ನಿನ್ನದಲ್ಲವೆ?

ಮಧುಮತಿ — ನನ್ನದಲ್ಲ.

ಕಾಯಸ್ಥ — ನಿನ್ನ ಹಾರದಂತೆಯೇ ಕಾಣಿಸುವುದೊ?

ಮಧುಮತಿ — ಇಂಥಾ ಅನರ್ಘ್ಯವಾದ ಆಭರಣವು ನನಗೆ ಹೇಗೆ ಬರುವುದು!

ಸಮರ್ಥಕ — ವಿಲಾಸಚಂದ್ರನನ್ನು ನೀನು ಬಲ್ಲೆಯೊ?

ಮಧುಮತಿ — ಆತನು ಯಾರು?

ಕಾಯಸ್ಥ — ಇದೊ ಇಲ್ಲಿರುವವನು (ಎಂದು ವಿಲಾಸಚಂದ್ರನನ್ನು ತೋರಿಸುವನು)

ಮಧುಮತಿ — ನಾನು ಕಾಣೆ.

ಸಮರ್ಥಕ — (ಸ್ವಗತ) ನಾನೆಷ್ಟು ಯುಕ್ತಿಯನ್ನು ಪ್ರಯೋಗಿಸಿದರೂ ಇದರ ನಿಶ್ಚಯಾಂಶವು ವ್ಯಕ್ತವಾಗಲಿಲ್ಲ. ಈಗೇನು ಮಾಡಲಿ? (ಎಂದು

ಪ್ರಕಾಶಂ) ಅಯ್ಯಾ ವಿಲಾಸಚಂದ್ರನೆ! ಈ ಹಾರವನ್ನು ಕೌಟಿಲ್ಯಶೇಖರನು ಕೊಡಲಿಲ್ಲವೆಂದೂ ನಿನ್ನ ಸ್ನೇಹವು ತನಗಿಲ್ಲವೆಂದೂ ನಿನ್ನೆದುರಾಗಿಯೇ ಹೇಳಿರುವನಷ್ಟೆ. ಇವನೇ ಇದನ್ನು ನಿನಗೆ ಕೊಟ್ಟನೆಂಬುವುದಕ್ಕೆ ನಿದರ್ಶನವೇನಿರುವುದು?

ವಿಲಾಸಚಂದ್ರ ನನ್ನ ಪರಿಚಯವೇ ತನಗಿಲ್ಲವೆಂದು ಹೇಳಿದ ಮೇಲೆ ಈ ಹಾರವನ್ನು ತಾನು ಕೊಟ್ಟೆನೆಂದು ಹೇಳುವನೆ!

ಕೌಟಿಲ್ಯ (ಸ್ವಗತ) ನಾನು ಈಗ ಮಾಡಿರುವ ಮೋಸಕ್ಕೆ ಪ್ರತಿಯಾಗಿ ಇವನೂ ಆ ಅಮರದತ್ತನೂ ನನಗೆ ಕೇಡನ್ನು ಮಾಡುವರೋ ಏನೋ ತಿಳಿಯದು. ಹೇಗಾದರೂ ಮಾಡಿ ಈ ವಿಲಾಸಚಂದ್ರನಿಗೆ ಮರಣದಂಡನೆಯನ್ನೇ ಉಂಟು ಮಾಡಿಸಿದರೆ ನನಗೆ ಭಯವಿಲ್ಲ.

ಸಮರ್ಥಕ ಅಯ್ಯಾ ಕೌಟಿಲ್ಯಶೇಖರನೆ! ಈ ವಿಲಾಸಚಂದ್ರನೂ ನೀನೂ ಸ್ನೇಹಿತರಾಗಿದ್ದುದು ನಿಶ್ಚಯವೊ?

ಕೌಟಿಲ್ಯ ಏನು! ಈ ಶಿಶುಘಾತುಕನೊಡನೆ ನಾನು ಸ್ನೇಹವನ್ನು ಮಾಡಲೆ?

ಸಮರ್ಥಕ (ಯೋಚಿಸಿ ಸ್ವಗತ) ನಾನು ವಿಚಾರ ಮಾಡುತ್ತಿದ್ದರೆ ಒಂದೊಂದಾಗಿ ಈ ವಿಲಾಸಚಂದ್ರನ ಮೇಲೆ ಅಪರಾಧಗಳೇ ನಿರ್ಧರಿಸಲ್ಪಡುವುದಲ್ಲ

ಅರಾತಿಸಿಂಹ ಸ್ವಾಮಿ! ಈ ವಿಲಾಸಚಂದ್ರನನ್ನು ಶಿಶುಘಾತುಕನೆಂದು ಈಗ ಹೇಳಿದನು. ಅದು ಹೇಗೆಂಬುದನ್ನು ವಿಚಾರಿಸಬೇಕು.

ಕೌಟಿಲ್ಯ (ಸ್ವಗತ) ನಾನು ಅದೇ ಯೋಚನೆಯಿಂದಲೇ ಹಾಗೆ ಹೇಳಿದ್ದು.

ಸಮರ್ಥಕ ಅಯ್ಯಾ! ಈತನು ಶಿಶುಘಾತುಕನೆಂದು ಹೇಳಿದೆಯಲ್ಲಾ. ಅದು ಹೇಗೆ?

ಕೌಟಿಲ್ಯ ನಾನದನ್ನೇಕೆ ತಿಳಿಸಲಿ. ಹಾರದ ವಿಷಯವನ್ನು ವಿಚಾರಿಸುವುದಕ್ಕೋಸ್ಕರ ನನ್ನನ್ನು ಕರೆಯಿಸಿ ಅಪ್ರಸ್ತುತವಾದ ವಿಷಯವನ್ನು ವಿಚಾರಿಸಬಾರದಲ್ಲವೆ?

ಸಮರ್ಥಕ ಅಯ್ಯಾ! ಇದಪ್ರಸ್ತುತವಲ್ಲ. ಇವನು ಶಿಶುಘಾತುಕನೆಂಬುದು ನಿಶ್ಚಯವಾದ ಪಕ್ಷದಲ್ಲಿ ಈ ಹಾರದ ವಿಷಯವು ಇತ್ಯರ್ಥವಾಗುವುದು. ಆದ್ದರಿಂದ ಹೇಳು.

ಕೌಟಿಲ್ಯ. (ಸ್ವಗತಂ) ಈಗ ಯಾಮಿತ್ರಾಧಿಪತಿಯಾದ ಭೀಷಣಕನು ವಿಮಲಾನದಿಯ ತೀರದಲ್ಲಿ ನಡೆಯಿಸಿರುವ ಕೃತ್ರಿಮಕಾರ್ಯವನ್ನೆಲ್ಲಾ

ನನ್ನೊಡನೆ ತಿಳಿಸಿರುವನು. ಅವನು ಹೇಳಿಕೊಟ್ಟಿರುವಂತೆ ಎಲ್ಲವನ್ನೂ ನಾನು ತಿಳಿಸಿದರೆ ನನಗೆ ಶತ್ರುಶಂಕೆಯು ನಿವಾರಣೆಯಾಗುವುದಲ್ಲದೆ ಘಾತುಕರನ್ನು ಕಂಡುಹಿಡಿದನೆಂಬ ಯಶಸ್ಸು ಭೀಷಣಕನಿಗೂ ಉಂಟಾಗುವುದು. (ಪ್ರಕಾಶಂ) ಸ್ವಾಮೀ! ನೆನ್ನೆಯ ದಿನ ನಾನು ವಿಮಲಾನದಿಗೆ ಹೋಗಿದ್ದೆನು. ಅಲ್ಲಿ ಸೋಪಾನದ ಮೇಲೆಲ್ಲಾ ರಕ್ತವು ಸ್ರವಿಸಿ ಮನಸ್ಸಿಗೆ ಅಸಹ್ಯವನ್ನುಂಟುಮಾಡುತ್ತಿದ್ದಿತು. ಇವನು ಅಲ್ಲಿ ಕಳೆಗುಂದಿದವನಾಗಿ ಕುಳಿತುಕೊಂಡು ಏನೋ ಚಿಂತಿಸುತ್ತಿದ್ದನು. ನನ್ನನ್ನು ಕಂಡೊಡನೆಯೇ ಭೀತನಾಗಿ ಎದ್ದು ಸಮೀಪದಲ್ಲಿಟ್ಟುಕೊಂಡಿದ್ದ ಒಂದು ದೊಡ್ಡ ಪದಾರ್ಥವನ್ನು ನದಿಯೊಳಕ್ಕೆ ಹಾಕಿದನು. ಅದನ್ನು ನಾನು ಸ್ಥಿರದೃಷ್ಟಿಯಿಂದ ನೋಡಲು ಅದೊಂದು ಬಾಲಕನ ಮೃತಶರೀರವೆಂದು ಬೋಧೆಯಾಯಿತು. ತಕ್ಷಣವೇ ನಾನಾ ವಿಷಯವನ್ನು ಯಾಮಿಕಾಧಿಪತಿಯಾದ ಈ ಭೀಷಣಕನೊಡನೆ ಹೇಳಿದೆನು.

ಸಮರ್ಥಕ. (ಭೀಷಣಕನಕಡೆ ತಿರುಗಿ) ಅಯ್ಯಾ! ಇದು ನಿಶ್ಚಯವೇ?

ಭೀಷಣಕ. ಇದೆಲ್ಲಾ ನಿಶ್ಚಯವೇ ಸರಿ.

ಸಮರ್ಥಕ ಅಯ್ಯಾ! ಕೌಟಿಲ್ಯನೆ! ಅದನ್ನು ನೀನೇಕೆ ಮೇಲಕ್ಕೆಳೆದು ತರಲಿಲ್ಲ?

ಕೌಟಿಲ್ಯ ಇವನು ಅದನ್ನು ನದಿಯಲ್ಲಿ ಹಾಕಿದೊಡನೆಯೇ ಒಂದು ಮತ್ಸ್ಯವು ನುಂಗಿತು. ಆದ್ದರಿಂದ ತರಲಿಲ್ಲ.

ಸಮರ್ಥಕ ಅದಕ್ಕೆ ಗುರುತೇನು?

ಕೌಟಿಲ್ಯ ಅಲ್ಲಿ ರಕ್ತದ ಕಲೆಗಳಿರುವುದೇ ಗುರುತು.

ಸಮರ್ಥಕ ಅಯ್ಯಾ ಶಿಲಾವರ್ಮನೆ! ಈತನೊಡನೆ ವಿಮಲಾನದಿಯ ತೀರಕ್ಕೆ ಹೋಗಿ ಪರೀಕ್ಷಿಸಿಕೊಂಡು ಬಾ.

ಶಿಲಾವರ್ಮ ಅಪ್ಪಣೆ. (ಎಂದು ಕೌಟಿಲ್ಯಶೇಖರನೊಡನೆ ಹೋಗುವನು.)

ಸಮರ್ಥಕ (ನಿಟ್ಟುಸಿರು ಬಿಟ್ಟು) ಈತನು ನಿರ್ದೋಷಿಯೆಂದು ನಿರ್ಧರಿಸುವುದಕ್ಕೋಸ್ಕರ ನಾನು ಮಾಡಿದಸಾಹಸವೆಲ್ಲಾ ಈತನೇ ದೋಷಿಯೆಂದು ನಿರ್ಧರಿಸಿತಲ್ಲಾ ಏನುಮಾಡಲಿ. ಈ ನ್ಯಾಯಾಧಿಕಾರಿಯ ಪದವಿಯು ಬಹು ವಿಪತ್ಕರವಾದದ್ದು. ಈ ಪದವಿಯಲ್ಲಿರುವವನು ಎಷ್ಟು ಜಾಗರೂಕನಾಗಿದ್ದರೂ ಒಂದೊಂದುವೇಳೆ ನಿಷ್ಕಾರಣವಾಗಿ

ಘೋರಪಾತಕಗಳು ಸಂಭವಿಸುವವು. ಕೆಲಕೆಲವು ವ್ಯವಹಾರಗಳನ್ನು ವಿಚಾರಿಸಿ ಇಂಥವನೇ ದೋಷಿಯೆಂದು ನಿರ್ಧರಿಸಲು ಅಸಾಧ್ಯವಾಗುವುದು. ದೋಷಿಯಾದವನು ತನ್ನ ದೋಷವನ್ನು ಮರೆಮಾಡಿಕೊಳ್ಳುವುದಕೋಸ್ಕರ ಅನೇಕ ಸುಳ್ಳು ವಿಷಯಗಳನ್ನು ಹೇಳಿ ಪ್ರಬಲವಾದ ನಿದರ್ಶನಗಳನ್ನು ಕೊಡುವುದರಿಂದ ನಿರಪರಾಧಿಯು ಶಿಕ್ಷೆಯನ್ನು ಅನುಭವಿಸಬೇಕಾಗುವುದು. ನ್ಯಾಯವಿಮರ್ಶಕನಿಗೆ ಇಂಥವನೇ ದೋಷಿಯೆಂದು ಸ್ಪಷ್ಟವಾಗಿ ತಿಳಿದಿದ್ದರೂ ಕೆಲವು ವೇಳೆಗಳಲ್ಲಿ ನ್ಯಾಯಶಾಸ್ತ್ರಾನುಸಾರವಾಗಿಯೂ, ಯಥಾರ್ಥವೆಂದು ತೋರಿಸತಕ್ಕ ನಿದರ್ಶನಗಳಿಂದಲೂ ದೋಷಿಯು ನಿರಪರಾಧಿಯೆಂದೇ ನಿರ್ಧರಿಸಲ್ಪಡುವನು. ಈ ವಿಧವಾಗಿ ಸಂಭವಿಸತಕ್ಕ ವ್ಯವಹಾರಗಳನ್ನು ತನ್ನ ಚಾತುರ್ಯದಿಂದ ವಿಮರ್ಶೆ ಮಾಡದೇ ಕೇವಲ ಶಾಸ್ತ್ರಾನುಸಾರವಾಗಿಯೇ ವ್ಯವಹರಿಸುವ ನ್ಯಾಯವಿಮರ್ಶಕನು ಪಾಪ ಸಮೂಹವನ್ನು ಸುಲಭವಾಗಿ ಸಂಪಾದಿಸಿಕೊಂಡು ಧರ್ಮಿಷ್ಠನಾದ ರಾಜ್ಯಾಧಿಕಾರಿಯನ್ನೂ ಸಮಭಾಗಿಯನ್ನಾಗಿ ಮಾಡುವನು. ಇದರಿಂದ ರಾಜ್ಯಕ್ಕೆ ಕ್ಷೋಭೆಯುಂಟಾಗುವುದರಲ್ಲಿ ಸಂದೇಹವೇ ಇಲ್ಲ. ನ್ಯಾಯವಿಮರ್ಶಕನು ಯಾವಾಗಲೂ ಸಹನಗುಣವನ್ನೇ ಅವಲಂಬಿಸಿ ಅಪರಾಧಿಯನ್ನು ವಿಚಾರಿಸುವಾಗ ಚತುರೋಪಾಯಗಳನ್ನು ಪ್ರದರ್ಶನಮಾಡಿ ನಿಶ್ಚಯಾಂಶವನ್ನು ತಿಳಿದುಕೊಳ್ಳುವ ಧೀರನಾಗಿರಬೇಕು. ಹಾಗಿಲ್ಲದವನು ಈ ಪದವಿಗೆ ಬಹುದೂರನು ಈಗ ವಿಲಾಸಚಂದ್ರನ ವಿಷಯದಲ್ಲಿ ನಿಶ್ಚಯಾಂಶವು ತಿಳಿದಿಲ್ಲವೆಂದು ನನ್ನ ಮನಸ್ಸಿಗೆ ದೃಢವಾಗಿ ನಂಬಿಕೆಯಿರುವುದು. ಆದರೂ ಈಗ ಬಂದಿರುವ ನಿದರ್ಶನಗಳು ಅವನೇ ದೋಷಿಯೆಂದೂ ರಾಜಕುಮಾರನನ್ನು ಸಂಹರಿಸಿದವನೆಂದೂ ವ್ಯಕ್ತಪಡಿಸುತ್ತಿರುವುವು ಈಗೇನು ಮಾಡಲಿ ( ಎಂದು ಯೋಚಿಸುತ್ತಿರುವನು )

(ಅನಂತರ ಕೌಟಿಲ್ಯಶೇಖರನೊಡನೆ ಶಿಲಾವರ್ಮನ ಪ್ರವೇಶ)

**ಸಮರ್ಥಶೀಲ** ಅಯ್ಯಾ ಶಿಲಾವರ್ಮನೆ! ಈತನು ಹೇಳಿದ್ದು ನಿಶ್ಚಯವೋ?

**ಶಿಲಾವರ್ಮ** ಸ್ವಾಮಿ ನಿಶ್ಚಯವಾಗಿರುವುದು.

**ಸಮರ್ಥಶೀಲ** ಅಯ್ಯಾ ಕೌಟಿಲ್ಯಶೇಖರನೆ! ಈ ವಿಲಾಸಚಂದ್ರನು ನದಿಯಲ್ಲಿ

ಹಾಕಿದ ಮೃತ ಶರೀರವು ಯಾರದಾಗಿರಬಹುದು?

ಕೌಟಿಲ್ಯ — ಅದನ್ನು ಹೇಳುವುದು ಹೇಗೆ?

ಸಮರ್ಥಕ — ನಿನಗೆ ಹೇಗೆ ತೋರುವುದು?

ಕೌಟಿಲ್ಯ — ಅದನ್ನು ನಾನು ಕಾಣೆ.

ಅರಾತಿಸಿಂಹ — ಸ್ವಾಮಿ! ನನ್ನ ವಿಜ್ಞಾಪನೆಯೊಂದಿರುವುದು. ಕುಮಾರಧೀರ ವರ್ಮನು ಅಪಹೃತನಾದ ದಿವಸ ಈ ವಿಲಾಸಚಂದ್ರನು ಪುಷ್ಕರೋದ್ಯಾನದಲ್ಲಿ ಮೂರ್ಛಿತನಾಗಿ ಬಿದ್ದನು. ಇದನ್ನು ಪರ್ಯಾಲೋಚಿಸಿದರೆ ಇವನೇಯಾರನ್ನೋ ತನ್ನ ಸಹಾಯಕ್ಕೋಸ್ಕರ ಅಲ್ಲಿಗೆ ಕರೆತರಲು ರಾಜಕುಮಾರನ ಆಭರಣಗಳ ವಿಷಯದಲ್ಲಿ ಪರಸ್ಪರ ಕಲಹವುಂಟಾಗಿ ಸಹಾಯಕ್ಕೆ ಬಂದಿದ್ದವರೇ ಇವನನ್ನು ಹೊಡೆದು ಕೆಡವಿ ರಾಜಕುಮಾರನನ್ನು ಎತ್ತಿಕೊಂಡು ಹೋಗಿರುವಂತೆ ತೋರುವುದು. ಇವನು ಮೂರ್ಛೆ ತಿಳಿದೆದ್ದಮೇಲೆ ತನ್ನ ಸಹಾಯಕರನ್ನು ಹುಡುಕಿಕೊಂಡು ಹೋಗಿ ಒಡವೆಯ ಆಸೆಯಿಂದ ಅವರೊಡನೆ ಪುನಃ ಸ್ನೇಹವನ್ನು ಬೆಳೆಯಿಸಿ ರಾಜಕುಮಾರನನ್ನು ಕೊಂದಿರುವಂತೆಯೂ ತೋರುವುದು.

ಸಮರ್ಥಕ — (ವಿಲಾಸಚಂದ್ರನ ಕಡೆ ತಿರುಗಿ) ಅಯ್ಯಾ ವಿಲಾಸಚಂದ್ರನೆ! ನೀನೇನುಹೇಳುವೆ?

ವಿಲಾಸಚಂದ್ರ — ನಾನು ಹೇಳುವುದನ್ನೆಲ್ಲಾ ಹೇಳಿಯೇ ಇರುವೆನು.

ಸಮರ್ಥಕ — ಇವನು ಹೇಳಿದುದನ್ನು ಕೇಳಿದೆಯೋ?

ವಿಲಾಸಚಂದ್ರ — ಎರಡು ಕಿವಿಗಳಿಂದಲೂ ಚೆನ್ನಾಗಿ ಕೇಳಿದೆನು.

ಸಮರ್ಥಕ — ಈ ಅಪರಾಧವನ್ನು ಒಪ್ಪಿಕೊಳ್ಳುವೆಯೋ?

ವಿಲಾಸಚಂದ್ರ — ನಾನೊಪ್ಪಿಕೊಳ್ಳದಿದ್ದುದರಿಂದ ನಷ್ಟವೇನು?

ಸಮರ್ಥಕ — ಹಾಗಲ್ಲ ನಿನ್ನ ಮುಖಭಾವವನ್ನೂ ನಿನ್ನ ಕುಲಗೌರವವನ್ನೂ ಪರಿಶೀಲಿಸಿದರೆ ನೀನಿಂಥಾ ಕಾರ್ಯವನ್ನು ಮಾಡಲಾರೆ ಎಂದು ನನಗೆ ತೋರುವುದು. ಈತನ ಹೇಳಿಕೆಯನ್ನೂ ನಿದರ್ಶನಗಳನ್ನೂ ಪರ್ಯಾಲೋಚಿಸಿದರೆ ನೀನೇ ಈ ಘೋರಕೃತ್ಯವನ್ನು ಮಾಡಿದವನೆಂದು ವಿಶದವಾಗುವುದು. ಈಗೇನು ಹೇಳುವೆ?

ವಿಲಾಸಚಂದ್ರ — ವಿಧಿಯು ಹೇಗೆ ಪ್ರೇರೇಪಿಸುವುದೋ ಹಾಗೆಯೇ ನಡೆಯಬೇಕಲ್ಲವೆ?

ನಾನಾದರೆಸೀ ಜಗದೀಶ್ವರನ ಪಾದಸಾಕ್ಷಿಯಾಗಿರಾಜ ಕುಮಾರನ ವಿಷಯವನ್ನರಿಯೆನು.

ಸಮರ್ಥಕ (ಏನೋ ಬರೆದು) ರಾಜಕುಮಾರನ ಸರವು ವಿಲಾಸಚಂದ್ರನ ಬಳಿಯಲ್ಲಿ ಸಿಕ್ಕಿದುದರಿಂದಲೂ ರಾಜಪುತ್ರನು ಅಪಹೃತನಾದ ದಿವಸ ವಿಲಾಸಚಂದ್ರನು ಪುಷ್ಕರೋದ್ಯಾನದಲ್ಲಿದ್ದುದರಿಂದಲೂ ಕೌಟಿಲ್ಯಶೇಖರನ ಹೇಳಿಕೆಯಂತೆ ವಿಮಲಾ ನದೀ ತೀರದಲ್ಲಿ ರಕ್ತದ ಕಲೆಗಳು ಕಾಣಬರುತ್ತಿರುವುದರಿಂದಲೂ ವಿಲಾಸಚಂದ್ರನು ಶಿಶುಹತ್ಯವನ್ನು ಮಾಡಿರುವನೆಂದು ತೋರಿಸುವ ಈ ನಿದರ್ಶನಗಳಿಂದಲೂ ವಿಲಾಸಚಂದ್ರನೇ ಆಭರಣದ ಆಸೆಯಿಂದ ರಾಜಕುಮಾರನನ್ನು ಅಪಹರಿಸಿಕೊಂಡು ಹೋಗಿ ಕೊಂದಿರುವನೆಂದು ನಿರ್ಧರಿಸಲ್ಪಟ್ಟಿರುವುದು. ಆದುದರಿಂದ ರಾಜಶಾಸನವೂ ನ್ಯಾಯಶಾಸ್ತ್ರವೂ ಅಶೋಕನಗರದ ವಿನಯ ಸೇನನ ಮಗನಾದ ವಿಲಾಸಚಂದ್ರನನ್ನು ಮರಣದಂಡನೆಗೆ ಗುರಿ ಮಾಡಿರುವುದು. ಪ್ರಮಾದದಿಂದ ಪಾತಕವು ಸಂಭವಿಸಬಹುದಾದರೆ ಇದಕ್ಕೆ ವಿಧಿಯೇ ಪ್ರಮಾಣ. (ಎಡೋದಿ) ಅಯ್ಯಾ ಅರಾತಿಸಿಂಹನೆ! ಮಂತ್ರಿಶ್ರೇಷ್ಠನ ಆಜ್ಞಾನುಸಾರ ಎರಡು ನಿಮಿಷಗಳೊಳಗಾಗಿ ಪ್ರಾಣೋತ್ಕ್ರಮಣವನ್ನುಂಟು ಮಾಡತಕ್ಕ ಆಯುಧ ವಿಶೇಷಗಳೊಡನೆ ಈ ವಿಲಾಸಚಂದ್ರನನ್ನು ಚಂಡಾಲರ ವಶಮಾಡು. (ಎಂದು ಕಾಯಸ್ಥನೊಡನೆ ಹೊರಟು ಹೋಗುವನು.)

ಕೌಟಿಲ್ಯ (ಸ್ವಗತ) ನನಗೆ ಬಂದಿದ್ದ ಅಪಮೃತ್ಯುವು ಉಪಾಯದಿಂದ ನಿವಾರಣೆ ಯಾಯಿತು. ಅಲ್ಲದೆ ಇನ್ನು ಉತ್ಪಲಕುಮಾರಿಯೂ ಮಧುಮತಿಯೂ ನನ್ನ ಕೈಸೇರುವದರಲ್ಲಿ ಸಂದೇಹವೇಯಿಲ್ಲ. (ಎಂದು ವಿಲಾಸಚಂದ್ರನ ಕಡೆಗೆ ತಿರುಗಿ) ಆಃ ನಾನಿವನನ್ನು ನೋಡಿದರೆ ನನ್ನ ಮನಸ್ಸಿಗೇಕೊ ದುಃಖವೂ ಭಯವೂ ಲಜ್ಜೆಯೂ ಏಕಕಾಲದಲ್ಲಿ ಸಂಭವಿಸಿ ನನ್ನನ್ನು ಸಂಕಟಪಡಿಸುವದಲ್ಲಾ. ಈಗ ನಾನಿಲ್ಲಿಂದ ಹೊರಟು ಹೋಗುವುದೇ ಒಳ್ಳೇದು. (ಎಂದು ಹೊರಟು ಹೋಗುವನು.)

ಮಧುಮತಿ (ಸ್ವಗತ) ಆಃ ಲೋಕದಲ್ಲಿ ಸ್ತ್ರೀಯರೇ ಕಠಿನ ಮನಸ್ಕರೆಂತಲೂ ಅದರಲ್ಲಿಯೂ ವೇಶ್ಯೆಯರ ಮನಸ್ಸು ಅತಿಕಠಿನವೆಂತಲೂ ಅಜ್ಞರಾದವರು ಅನಿಸಿಕೊಳ್ಳುವರಲ್ಲಾ. ಈ ದುಷ್ಟನಾದ ಕೌಟಿಲ್ಯನು ಬಾಲ್ಯಾರಭ್ಯ

ವಿಲಾಸಚಂದ್ರನೊಡನೆ ಆಡುತ್ತಿದ್ದು ಅವನ ಧನವನ್ನೆಲ್ಲಾ ನಾಶಪ
ಡಿಸಿ ಇಲ್ಲದ ಅಪವಾದವನ್ನು ಹೊರಿಸಿ ಅವನಿಗೆ ಮರಣ ದಂಡನೆ
ಯನ್ನೇ ಉಂಟು ಮಾಡಿಸಿದನಲ್ಲಾ ಇನ್ನು ಲೋಕದಲ್ಲಿ ಇವನಂಥಾ
ಕಠಿನ ಮನಸ್ಕರಿರುವರೇ? (ಎಂದು ನಿಟ್ಟುಸಿರುಬಿಟ್ಟು) ನಾನೀಮಿತ್ರ
ದ್ರೋಹಿಯನ್ನು ನನ್ನ ಮನೆಗೆ ಸೇರಿಸಿದರೆ ಇವನು ಒಂದಾನೊಂದು
ಕಾಲದಲ್ಲಿ ನನ್ನನ್ನೂ ನಿರ್ಮೂಲ ಮಾಡದೇ ಬಿಡನು. ಆದ್ದರಿಂದ
ನಾನಿವನನ್ನು ದೂರ ಮಾಡುವುದೇ ಸರಿ. (ಎಂದು ಹೊರಟು
ಹೋಗುವಳು.)

ಅರಾತಿಸಿಂಹ ಎಲೈ ಶಿಕ್ಷಾವರ್ಗ ಭೀಷಣಕರರಿರಾ! ಇವನನ್ನು ಚಂಡಾಲರ ವಶಪಡಿಸಿ
ನೀವೂ ಜಾಗರೂಕರಾಗಿ ನೋಡಿಕೊಳ್ಳತಕ್ಕದ್ದು. ಈಗ ಸಂಧ್ಯಾ
ಕಾಲವು ಸನ್ನಿಹಿತವಾದುದರಿಂದ ಇವನನ್ನು ಸೆರೆಯಲ್ಲೇ ಇಟ್ಟಿದ್ದು
ನಾಳೆಯದಿನ ಪ್ರಾತಃಕಾಲ ಈತನು ಮಾಡಿರುವ ಘೋರ ಕೃತ್ಯ
ವನ್ನೂ ಅದಕ್ಕೋಸ್ಕರ ಇವನಿಗೆ ಕೊಟ್ಟಿರುವ ಶಿಕ್ಷೆಯನ್ನೂ ಪಟ್ಟಣದ
ಬೀದಿಗಳಲ್ಲೆಲ್ಲಾ ಪ್ರಸಿದ್ಧಪಡಿಸಿ ಇನ್ನು ಮೇಲೆ ಯಾರೂ ಇಂಥಾ
ಕೃತ್ಯವನ್ನು ಮನಸ್ಸಿನಲ್ಲಿಯೂ ಸ್ಮರಿಸದಂತೆ ಭಯಪಡಿಸಿ ನ್ಯಾಯಾ
ಧಿಪತಿಯ ಆಜ್ಞೆಯನ್ನು ನೆರವೇರಿಸತಕ್ಕದ್ದು. ಇನ್ನು ನಾನು ಹೋಗಿ
ಬರುವೆನು. (ಎಂದು ಹೊರಟು ಹೋಗುವನು.)

ವಿಲಾಸಚಂದ್ರ ಅಯ್ಯೋ ನಾನು ಮೋಸ ಹೋದೆನು. ಈ ನೀಚನಾದ ಕೌಟಿಲ್ಯ
ಶೇಖರನನ್ನು ಸನ್ಮಿತ್ರನೆಂದು ಭಾವಿಸಿ ಇವನು ಹೇಳಿದುದನ್ನೆಲ್ಲಾ
ನಿಶ್ಚಯವೆಂದು ನಂಬಿ ಆಪ್ತಮಿತ್ರನಾದ ಅಮರದತ್ತನನ್ನು ತಿರಸ್ಕ
ರಿಸಿ ಈ ದುಷ್ಟನನ್ನು ಅನುಸರಿಸಿದುದಕ್ಕೆ ತಕ್ಕ ಫಲ ಉಂಟಾಯಿತು.
ಲೋಕದಲ್ಲಿ ಸ್ವಾರ್ಥಪರರಾದ ಇವನಂಥ ಮಿತ್ರದ್ರೋಹಿಗಳನ್ನು
ಯಥಾರ್ಥವಾದಿಗಳೆಂದು ನಂಬುವವರ ಅವಸ್ಥೆಯೆಲ್ಲಾ ಹೀಗೆಯೇ
ಸರಿ. ಅಯ್ಯೋ! ಈ ದುಷ್ಟನು ನನ್ನನ್ನು ಅನ್ಯಾಯವಾಗಿ ಅಪ
ಯಶಸ್ಸಿಗೆ ಗುರಿ ಮಾಡಿದನಲ್ಲಾ ನಾನು ಶಿಶುಘಾತುಕನೆಂಬ ಅಪವಾ
ದವನ್ನು ಹೊಂದಿ ಅಕಾಲದಲ್ಲಿ ಸಾಯಬೇಕಾಯಿತಲ್ಲಾ. ಅಕಟಾ
ಪ್ರಾಣಪ್ರಿಯೆಯಾದ ಉತ್ಪಲೆಗೆ ಈ ವಿಷಯವು ತಿಳಿದರೆ ಅವಳು
ವ್ಯಸನ ಪಡುವಳೋ ಅಥವಾ ನಾನೇ ಈ ಘೋರಕೃತ್ಯವನ್ನು ಮಾಡಿ

ದವನೆಂದು ಭಾವಿಸಿ ನಿಂದಿಸುವಳೋ ತಿಳಿಯದು.

ಕಂ|| ನಲ್ಲೆಯುಗಲ್ಕೆ ಗೆಚಿಂತಿಪೆ|
ನಲ್ಲದೆ ತನುಪೋಪುದೆಂದು ಚಿಂತಿಸೆನಿನಿಸುಂ||
ಪಲ್ಲವಿಸಿರ್ಪೀ ಅಪಯಶ|
ಕಲ್ಲದೆ ಸಮನಿಸಿದಳುಕ್ಕೆ ಗಂಜುವುದಿಲ್ಲಂ||೨||

ಇನ್ನು ವ್ಯಸನ ಪಟ್ಟೇನು ಫಲ. ಆಪ್ತಾನಾಪ್ತವಿವೇಚನೆಯಿಲ್ಲದೆ ಸತ್ಯವಂತನಾದ ಅಮರದತ್ತನನ್ನು ನಿಂದಿಸಿದ ನನ್ನ ಕೃತ್ಯಕ್ಕೆ ಈ ಶಿಕ್ಷೆಯೂ ಅತ್ಯಲ್ಪವಾದುದೇ ಸರಿ. ಅಥವಾ ನಾನು ಕೌಟಿಲ್ಯ ಶೇಖರನನ್ನೇಕೆ ನಿಂದಿಸಲಿ, ವಿಧಿಯ ಪ್ರೇರಣೆಯಿಂದಲೇ ಅವ ನಿಂಥಾ ಅಕೃತ್ಯವನ್ನು ಮಾಡಿರುವನು. ಇದರಲ್ಲಿ ಸಂದೇಹ ವೇಕೆ? ಎಲೆಹತವಿಧಿಯೇ! ನೀನು ನನ್ನ ವಿಷಯದಲ್ಲಿ ಇಷ್ಟು ಕ್ರೂರ ನಾಗಬಹುದೇ ಬಾಲ್ಯದಲ್ಲಿಯೇ ನನ್ನ ಜನನೀ ಜನಕರಿಗೆ ಪಂಚತ್ವ ವನ್ನು ಹೊಂದಿಸಿ ನನ್ನನ್ನು ಅನಾಥನನ್ನಾಗಿ ಮಾಡಿದೆ. ನನ್ನನ್ನು ಅತ್ಯಾದರದಿಂದ ಪೋಷಿಸುತ್ತಿದ್ದ ನನ್ನ ಮಾತಾಮಹಿಯಾದ ತಾರಾಮಾಲಿನಿಗೆ ಸರ್ಪದಂಶನ ವ್ಯಾಜದಿಂದ ಲೋಕಾಂತರಪ್ರಾಪ್ತಿಯನ್ನುಂಟುಮಾಡಿದೆ ತ್ರಿಕಾಲದಲ್ಲಿಯೂ ನನ್ನ ಹಿತಚಿಂತನೆಯನ್ನೇ ಮಾಡುತ್ತಾ ನನ್ನೆಡೆ ಬಿಡದಿದ್ದ ಆಪ್ತನಾದ ಅಮರದತ್ತನನ್ನು ನನ್ನಿಂದ ದೂರ ಮಾಡಿಸಿದೆ. ತ್ರಿಭುವನೈಕಸುಂದರಿಯಾದ ಉತ್ಪಲೆಯೊಡನೆ ಕ್ಷಣಾರ್ಧ ಕಾಲವಾದರೂ ಸಂತೋಷವಾಗಿರದಂತೆ ಭಯಂಕರವಾದ ವಿಘ್ನ ಪರಂಪರೆಯನ್ನುಂಟು ಮಾಡಿದೆ. ಇಷ್ಟಾದರೂ ತೃಪ್ತನಾಗದೆ ನನ್ನ ಪ್ರಾಣವನ್ನೂ ಅಪೇಕ್ಷಿಸಿದೆ. ಈ ವಿಧವಾದ ನಿನ್ನ ಹಿಂಸೆಗೆ ನಾನು ಸ್ವಲ್ಪವಾದರೂ ಭಯಪಡುವುದಿಲ್ಲ. ಆದರೆ ಶಿಶುಘಾತುಕನೆಂಬ ಅಪವಾದವು ನನಗೆ ಸಂಭವಿಸಿದುದರಿಂದ ಪರಮಪವಿತ್ರವಾದ ನಮ್ಮ ಕುಲವು ಕಳಂಕಿತವಾಯಿತಲ್ಲಾ ಎಂದು ಮಾತ್ರ ವ್ಯಥೆಪಡುವೆನು. ಲೋಕದಲ್ಲಿ ಪ್ರಾಜ್ಞರಾದವರು ತಮ್ಮ ವಂಶೋನ್ನತಿಗೋಸ್ಕರ ಪುತ್ರಸಂತತಿಯನ್ನು ಅಪೇಕ್ಷಿಸುವರು. ಆದರೆ ನನ್ನಂಥಾ ಮಂದಭಾಗ್ಯನು ಪುತ್ರನಾದರೆ ಸಂತತಿಗೆ ಕಳಂಕವನ್ನುಂಟು ಮಾಡುವುದಲ್ಲದೆ ಮಾತಾಪಿತೃಗಳನ್ನು ನಿಂದೆನೆಗೆ ಗುರಿಮಾಡುವುದೇ

ನಿಶ್ಚಯ, ಹಾಗೆಯೇ ಸರಿ.

ಕಂ|| ವಿಲಸದ್ಗುಣಗಣದಿಂದಂ|
ಬೆಳಗುತೆ ನಿಜಕುಲಮನ್ನೈದೆ ಸತ್ಕೀರ್ತಿಯುಮಂ||
ತಳೆಯುತೆ ತೊಳಗುವನಿಳೆಯೊಳ್|
ಕುಲಪುತ್ರಂ ಮಿಕ್ಕನಲ್ತೆ ಕುಲಕೆ ಪವಿತ್ರಂ|| ೩||

ಶಿಲಾವರ್ಮ — ಅಯ್ಯಾ ವಿಲಾಸಚಂದ್ರನೆ! ನಡೆ. ಇನ್ನು ಕಾಲಹರಣ ಮಾಡಲಾಗದು.

ವಿಲಾಸಚಂದ್ರ — (ಸ್ವಗತ) ಆಃ. ನನ್ನ ದುರದೃಷ್ಟತೆಯನ್ನು ಏನು ಹೇಳಲಿ? ಈ ನೀಚಕುಲದವರೆಲ್ಲಾ ನನಗೆ ಆಜ್ಞೆ ಮಾಡುವಂತಾಯಿತಲ್ಲಾ. ಆಗಲಿ. ಇಹಲೋಕವ್ಯಾಪಾರವನ್ನೇ ಬಿಟ್ಟು ಹೋಗತಕ್ಕ ನನಗೆ ಈ ವಿಷಯದಲ್ಲಿ ವ್ಯಸನವೇಕೆ? ಆದರೆ ಮಾಯಾಪ್ರಭಾವದಿಂದ ಇದು ನನ್ನ ಮನಸ್ಸಿಗೆ ಅಪಮಾನವೆಂದು ತೋರುವುದು. ಎಲೆ ಮಾಯಾಪ್ರಭಾವವೇ! ನಾಳೆಯ ಪ್ರಾತಃಕಾಲದವರೆಗೂ ನಾನು ನಿನ್ನ ಅಧೀನನಾಗಿರುವೆನು. ಅದುವರೆಗೂ ನಿನ್ನ ಮಹಿಮೆಯು ನನ್ನಲ್ಲಿ ಅಪ್ರತಿಹತವಾದುದೇ ಸರಿ.

ವೃ|| ಧರೆಯೊಳ್ಪುಟ್ಟಿದನೀತನೆನ್ನ ಜನಕಂ ತಾಯಿಯೀಕೆಯೆನ್ನೋಪಳೀ|
ಸರಸೀಜಾನನೆ ಪುತ್ರನೀತನಿದುವೇ ಕ್ಷೇತ್ರಂ ಸುಹೃದ್ಬಂಧುಗಳ್||
ಅರಿಗಳ್ಮೇಣಿವರೆಂದು ಭಾವಿಸುತೆ ಗರ್ವೋತ್ಕರ್ಷದಿಂ ಬೀಗುವಂ|
ತಿರೆನೀಂಗೆಯ್ದಲೆ ಮಾಯೆ! ನಾಡೆಕುಣಿಸುತ್ತಿರ್ಪೈ ಮನುಷ್ಯರ್ಕಳಂ|

ಭೀಷಣಕ — ಅಯ್ಯಾ! ಸಾಯಂಕಾಲವಾಯಿತು ಜಾಗ್ರತೆಯಾಗಿ ನಡೆ.

ವಿಲಾಸಚಂದ್ರ — ಓಹೋ ಆಗಲೇ ಸಂಜೆಯಾಯಿತೊ? (ಎಂದು ಅಂತರಿಕ್ಷವನ್ನು ನೋಡಿ)

ವೃ|| ನಿರುಕಿಸಲಾರದೆನ್ನ ಯಳಲಂ ಪದಪಿಂ ದಿನನಾಥನಬ್ಧಿಯೊಳ್|
ನೆರೆಮುಳುಗಿರ್ಪನಂಬುರುಹಮೆನ್ನನ ಭೀಕ್ಷಿಸಲಾರದಯ್ದ್ಯತಾ||
ನರೆಮುಗಿದಿರ್ಪುದೆನ್ನ ನಪಕೀರ್ತಿ ಮುಸುಂಕಿಧ ಮಾಳ್ಕೆಯಿಂದವಾ|
ಧರಣಿಯನೆಲ್ಲಮಂ ಮುಸುಕಿತಾಯ್ತು ನೆಕಳ್ತಲೆಯಕ್ಕಟಕ್ಕಟಾ|| ೫||

ಅಯ್ಯಾ! ನಡೆಯಿರಿ ಹೋಗೋಣ. (ಎಂದು ಶಿಲಾವರ್ಮ ಭೀಷಣಕರೊಡನೆ ಹೊರಟು ಹೋಗುವನು.)

— : ೦ : —

||ಚತುರ್ಥಾಂಕಂ ಸಮಾಪ್ತಂ||

## ||ಪಂಚಮಾಂಕಂ||

—:೦:—

(ಕುಲಪಾಲಿಕೆಯ ಪ್ರವೇಶ)

ಕುಲಪಾಲಿಕೆ ಸಖಿಯಾದ ಉತ್ಪಲೆಗೆ ವಿರಹವ್ಯಥೆಯು ಕ್ಷಣೇಕ್ಷಣೇ ಹೆಚ್ಚುತ್ತಿರುವುದು. ಆ ವಿಲಾಸಚಂದ್ರನು ನೆನ್ನೆಯ ದಿನ ಸಾಯಂಕಾಲ ಕನ್ಯಾಂತಃಪುರದ ಬಳಿಗೆ ಬರುವನೆಂದು ನಿರೀಕ್ಷಿಸುತಲೇ ಇದ್ದಳು. ಅವನು ಅಲ್ಲಿಗೆ ಬರಲೇ ಇಲ್ಲ. ಈಗಲಾದರೂ ಅವನನ್ನು ಹುಡುಕಿ ಕರೆತರುವಂತೆ ನನಗೆ ಹೇಳಿದಳು. ಅವನೆಲ್ಲಿರುವನೋ ಅವನಿಗೆ ಉತ್ಪಲೆಯಲ್ಲಿ ಅನುರಾಗ ವಿರುವುದೋ ಇಲ್ಲವೋ ಹಾಗೆ ಅವನಿಗೆ ಅವಳಲ್ಲಿ ಅನುರಾಗ ವಿರುವುದಾದರೆ ನೆನ್ನೆಯದಿನವೇ ಅಲ್ಲಿಗೆ ಬರಬಹುದಾಗಿತ್ತು. ಆದ್ದರಿಂದ ಅವನಿಗೆ ಅನುರಾಗವಿಲ್ಲವೆಂದು ಹೇಳಲೇ ಅವನು ತನ್ನ ಉಂಗುರವನ್ನು ಉತ್ಪಲೆಗೆ ಕೊಟ್ಟಿರುವುದೂ ಉತ್ಪಲೆಯೊಡನೆ ನಡೆಯಿಸಿದ ಸಂಭಾಷಣವೂ ಇವುಗಳನ್ನು ಪರ್ಯಾಲೋಚಿಸಿದರೆ. ಉತ್ಪಲೆಗಿಂತಲೂ ಅವನಿಗೇ ಅನುರಾಗವೂ ಆತುರವೂ ಹೆಚ್ಚೆಂದು ತೋರುವುದು. ಆದರೇನು ಪುರುಷರು ಬಹುವಧೂವಲ್ಲಭತ್ವವನ್ನು ಅಪೇಕ್ಷಿಸುವರಲ್ಲವೆ ಆದ್ದರಿಂದ ವಿಲಾಸಚಂದ್ರನೂ ಅನನ್ಯಾಸಕ್ತ ಚಿತ್ತನಾಗಿರುವನೋ ಏನೋ ! ಈಗ ಅವನನ್ನೆಲ್ಲಿ ಹುಡುಕಲಿ. ( ಎಂದು ಕೆರೆಯಕಡೆತಿರುಗಿ ನೋಡಿ ) ಅದೇನು. ಇತ್ತಕಡೆ ಗುಂಪಾಗಿಬರುತ್ತಿರುವರು!

( ಕೆರೆಯಲ್ಲಿ ) ಅಯ್ಯಾ. ಇತ್ತನೋಡಿ, ಇವನು ಪುಷ್ಕರೋದ್ಯಾನದಲ್ಲಿ ಆಡುತ್ತಿದ್ದ ರಾಜಕುಮಾರನಾದ ಧೀರವರ್ಮನನ್ನು ಆಭರಣಗಳ ಆಸೆಯಿಂದ ಎತ್ತಿಕೊಂಡು ಹೋಗಿ ಕೊಂದು ಹಾಕಿರುವುದರಿಂದ ಇವನಿಗೆ ಮರಣದಂಡನೆಯು ವಿಧಿಸಲ್ಪಟ್ಟಿರುವುದು. ಇನ್ನುಮೇಲೆ ಯಾರಾದರೂ ಇಂಥಾ ಘೋರಕೃತ್ಯವನ್ನು ಆಚರಿಸಿದರೆ ಅವರಿಗೂ ಇದೇ ಶಿಕ್ಷೆಯಾದೀತೆಂದು ಮಂತ್ರಿಶ್ರೇಷ್ಠನಾದ ವಿಚಾರಕನು ಎಲ್ಲರನ್ನೂ ಎಚ್ಚರಿಸಿರುವನು.

ಕುಲಪಾಲಿಕೆ. ಇದೇನು ಇವರು ಹೇಳುವುದು! ರಾಜಕುಮಾರನನ್ನು ಅಪಹರಿಸಿ ಕೊಂಡು ಹೋಗಿದ್ದ ಕಳ್ಳನು ಸಿಕ್ಕಿದನೆ? ಆ! ಅವನಿಂದ ರಾಜ ಕುಮಾರನು ಸಂಹೃತನಾದನೆ! ಅವನು ಯಾರೋ ನೋಡಬೇ ಕೆಂದು ನನಗೂ ಕುತೂಹಲವಿರುವುದು. ಆದ್ದರಿಂದ ಇಲ್ಲಿ ನಿಂತು ನೋಡುವೆನು. ( ಎಂದು ಒಂದು ಪಾರ್ಶ್ವದಲ್ಲಿ ನಿಂತಿರುವಳು )

(ಅನಂತರ ಚಂಡಾಲರ ಮಧ್ಯದಲ್ಲಿರುವ ವಿಲಾಸಚಂದ್ರನ ಪ್ರವೇಶ)

ಎರಡನೆಚಂಡಾಲ ಅಯ್ಯಾ! ಇತ್ತ ನೋಡಿ ಇತ್ತ ನೋಡಿ ಇವನು ಪುಷ್ಕರೋದ್ಯಾನ ದಲ್ಲಿ ಆಡುತ್ತಿದ್ದ ಕುಮಾರ ಧೀರವರ್ಮನನ್ನು ಆಭರಣಗಳ ಆಸೆ ಯಿಂದ ಅಪಹರಿಸಿಕೊಂಡು ಹೋಗಿ ಕೊಂದು ಹಾಕಿರುವುದರಿಂದ ಇವನಿಗೆ ಮರಣ ದಂಡನೆಯು ವಿಧಿಸಲ್ಪಟ್ಟಿರುವುದು. ಇನ್ನು ಮುಂದೆ ಯಾರಾದರೂ ಈ ವಿಧವಾದ ಘೋರ ಕೃತ್ಯಗಳನ್ನು ಮಾಡುವರಾದರೆ ಅವರಿಗೂ ಇದೇ ಶಿಕ್ಷೆಯುಂಟಾದೀತೆಂದು ಮಂತ್ರಿ ಶ್ರೇಷ್ಠನಾದ ನಿರ್ಜರಕನು ಎಚ್ಚರಿಸಿರುವನು. (ಎಂದು ಗಗನದಲ್ಲಿ ಲಕ್ಷ್ಯವಿಟ್ಟು) ಏನು? ಇವನು ಯಾರೆಂದು ಕೇಳುವಿರೊ? ಅಶೋಕ ನಗರದ ಅಮಾತ್ಯ ಶ್ರೇಷ್ಠನಾದ ಪ್ರಮೋದಚಂದ್ರನಿಗೆ ಇವನು ಮೊಮ್ಮಗ. ವಿನಯಸೇನನ ಮಗ. ಇವನ ಹೆಸರು ವಿಲಾ ಸಚಂದ್ರನೆಂದು.

ಕುಲಪಾಲಿಕೆ (ಸ್ವಗತ) ಏನು ವಿಲಾಸಚಂದ್ರನೆ! ಅಯ್ಯೋ! ವಿಧಿಯೇ ನಮ್ಮ ಉತ್ಪ ಲೆಯ ಅನುರಾಗವು ಇಂಥಾ ಪಾತ್ರದಲ್ಲಿ ಪರಿಣಮಿಸಿತೆ?

ಮೊದಲನೆಯವನು ಎಲೋ ಚಿತ್ರಮುಖನೆ! ಜಾಗ್ರತೆಯಾಗಿ ನಡೆ.

ಎರಡನೆಯವನು ಅಯ್ಯಾ ವಕ್ರನಾಸನೆ! ಇದು ಬಹು ಜನರು ಸಂಚರಿಸತಕ್ಕ ಬೀದಿಯಾದುದರಿಂದ ಇಲ್ಲಿ ಮತ್ತೊಂದು ಸಾರಿ ಗಟ್ಟಿಯಾಗಿ ಸಾರು

ಮೊದಲನೆಯವನು (ಮೊದಲಿನಂತೆ ಸಾರುವನು.)

ವಿಲಾಸಚಂದ್ರ (ನಿಟ್ಟುಸಿರು ಬಿಟ್ಟು)

ಕಂ|| ಚಿಂತಿಪೆನೆ? ಶಿಕ್ಷೆಗೀಗಳ್ |
ಚಿಂತಿಪೆನೇಂ? ಸಮನಿಸಿರ್ಪದುರ್ಯಶಕೆಕಟಾ||
ಚಿಂತಿಪೆನೇ? ನೆನ್ನಮನಃ |
ಕಾಂತೆಯವಿರಹಕ್ಕೆ ಮನಕೆ ಕೋರಡದೇನಂ||೧||

ಸಕಲ ವಿಧವಾದ ಪ್ರಾಣಿಕೋಟಿಗಳನ್ನು ಅನುದಿನವೂ ಸಂರಕ್ಷಿಸುತ್ತಿರುವ ಜಗನ್ನಾಯಕನೆ! ನನ್ನ ವಿಷಯದಲ್ಲಿ ನೀನು ಇಷ್ಟು ಔದಾಸೀನ್ಯವನ್ನು ವಹಿಸಬಹುದೇ? ನಾನು ನಿನಗೆ ವಿರೋಧವಾಗಿ ನಡೆದಿದ್ದೆನಾದರೆ ನೀನು ನನ್ನನ್ನು ಆಗಲೇ ಎಚ್ಚರಿಸಬಹುದಾಗಿತ್ತಲ್ಲವೆ? ಅಥವಾ ಆಗ ನೀನು ನನ್ನನ್ನು ನೋಡಲಿಲ್ಲವೊ? ಇಲ್ಲ. ಸರ್ವತಶ್ಚಕ್ಷುವಾದ ನಿನಗೆ ಕಾಣಿಸದಿರುವ ವಿಷಯವಾವುದು. ಕಾರ್ಯಗೌರವದಿಂದೇನಾದರೂ ನನ್ನನ್ನು ಉಪೇಕ್ಷಿಸಿರುವೆಯೊ? ಹಾಗೂ ಇರಲಾರದು. ಸೃಷ್ಟಿ ಸ್ಥಿತಿ ಲಯಾದಿಗಳನ್ನು ಇಚ್ಛಾ ಮಾತ್ರದಿಂದಲೇ ನಡೆಯಿಸುತ್ತಿರುವ ನಿನಗೆ ಇದೇನೂ ಅಸಾಧ್ಯವಾದ ಕಾರ್ಯವಲ್ಲ. ಈಗ ನಾನೆಷ್ಟು ಯೋಚಿಸಿದರೂ ನಾನು ಬದುಕಿರುವುದರಿಂದ ನಿನಗೆ ಯಾವ ವಿಧವಾದ ಕಷ್ಟವೂ ಇಲ್ಲವೆಂದು ತೋರುವುದು. ದೀನದಯಾಪರನಾದ ನೀನು ನನ್ನ ಪ್ರಾರ್ಥನೆಯನ್ನು ಕೇಳಿಯೂ ಕೇಳದವನಂತೆ ನಟಿಸಿ ನನ್ನನ್ನೇಕೆ ಸಂಕಟ ಪಡಿಸುವೆ? ಪರಮ ಪವಿತ್ರನಾದ ನಿನ್ನನ್ನು ಪಾಪಿಯಾದ ನಾನು ಕಲುಷಿತವಾದ ನನ್ನ ಮನಸ್ಸಿನಲ್ಲಿಟ್ಟುಕೊಂಡಿರುವುದೇ ನನ್ನ ಅಪರಾಧವಾದರೆ ಈ ಅಪರಾಧವನ್ನು ಮನಃಪೂರ್ವಕವಾಗಿಯೇ ನಾನು ಮಾಡಿದಂತಾಯಿತು. ಈ ಅಪರಾಧಕ್ಕೆ ಇಂತಹಘೋರವಾದ ಶಿಕ್ಷೆಯೇ? ಇದು ನ್ಯಾಯವೆನಿಸಿಕೊಳ್ಳುವುದೆ? ಇದರಿಂದ ದಯಾಪರನೆಂಬ ನಿನ್ನ ಬಿರುದಿಗೆ ನ್ಯೂನತೆಯುಂಟಾಗುವದಿಲ್ಲವೆ? ಹೇಗಾದರೂ ಆಗಲಿ ನನ್ನ ಈ ಪ್ರಾರ್ಥನೆಯೊಂದನ್ನಾದರೂ ನಡೆಯಿಸಿಕೊಡು. (ಎಂದು ಕೈ ಮುಗಿದುಕೊಂಡು)

ಕಂ|| ಧರೆಯೊಳ್ ಜನಿಯಿಸಿದಂದಿಂ|
ಕರೆತರೆಗೊಂಡಕಟ ಭವದೆ ಬಲ್ನೊಂದಿರ್ಪೆಂ||
ಕರುಣಿಸಿಮುಂದೆನಗೀಪರಿ|
ಮರುಮೆಯ್ಯುದುಬಾರದಂತೆಮಾಡೈದೇವಾ||೨||

ಮೊದಲನೆಯವನು. ಅಯ್ಯಾ ! ಬಹಳ ಹೊತ್ತಾಯಿತು. ಜಾಗ್ರತೆಯಾಗಿ ನಡೆ. (ಎಂದುಮತ್ತೊಬ್ಬಚಂಡಾಲನೊಡನೆ ವಿಲಾಸಚಂದ್ರನನ್ನು ಕರೆದುಕೊಂಡು ಹೋಗುವನು.)

ಕುಲಪಾಲಿಕೆ. ಅಯ್ಯೋ! ನನ್ನ ಸಖಿಯು ಈ ಘೋರಕರ್ತವ್ಯಯಾದ ವಿಲಾಸಚಂದ್ರ ನನ್ನು ಮೋಹಿಸಿದ್ದಳು. ಪಾಣಿಗ್ರಹಣವು ನಡೆದಿದ್ದರೆ ಎಂತಹ ಪ್ರಮಾದ ವುಂಟಾಗುತ್ತಿದ್ದಿತು! ಅವನು ನೆನ್ನೆ ಸಂಜೆ ಕನ್ಯಾಂತಃಪುರ ದೊಳಗೆ ಬಾರದಿದ್ದುದು ಒಳ್ಳೆಯದೇ ಆಯಿತು. ನಮ್ಮ ಉತ್ಪಲೆ ಯು ಅದೃಷ್ಟಶಾಲಿನಿಯೇ ಸರಿ. ನಾನೀ ಸಂತೋಷ ವರ್ತಮಾನ ವನ್ನವಳಿಗೆ ತಿಳಿಸಿ ಅವಳಿಂದ ನನ್ನ ಮನವೊಪ್ಪುವಂತಹ ರತ್ನಾ ಭರಣಗಳನ್ನು ಪಾರಿತೋಷಕವಾಗಿ ಹೊಂದುವೆನು. (ಎಂದು ಮುಂದೆ ಹೋಗುವುದರೊಳಗಾಗಿ)

ಕುಸುಮಪ್ರಭೆ. (ತೆರೆಯಲ್ಲಿ) ಕುಲಪಾಲಿಕೆ! ಕುಲಪಾಲಿಕೆ!

ಕುಲಪಾಲಿಕೆ. (ತಿರುಗಿನೋಡಿ) ಯಾರು! ಕುಸುಮಪ್ರಭೆಯೊ?

ಕುಸುಮಪ್ರಭೆ. (ಪ್ರವೇಶಿಸಿ) ಸಖಿ! ಕನ್ಯಾಂತಃಪುರದಲ್ಲಿ ಉತ್ಪಲೆಯೊಬ್ಬಳೇ ಇರು ವಳು. ಆದ್ದರಿಂದ ನೀನು ಜಾಗ್ರತೆಯಾಗಿಅಲ್ಲಿಗೆ ಹೋಗು.

ಕುಲಪಾಲಿಕೆ. ನೀನೆಲ್ಲಿ ಹೋಗುವೆ?

ಕುಸುಮಪ್ರಭೆ. ನಾನು ಕಾರ್ಯಾಂತರದಿಂದ ರಾಣಿವಾಸಕ್ಕೆ ಹೋಗಿ ಬರುವೆನು.

ಕುಲಪಾಲಿಕೆ. ರಾಜಕುಮಾರಿಯಾದ ಘನಸಾರಮಂಜರಿಗೆ ಮದುವೆಯಾಯಿತೇ?

ಕುಸುಮಪ್ರಭೆ. (ಜಿಗುಪ್ಸೆಪಟ್ಟು) ಸಖಿ! ಈ ಅಪ್ರಕೃತವಾದ ಪ್ರಸ್ತಾಪದಿಂದ ಫಲ ವಿಲ್ಲ. ಉತ್ಪಲೆಯ ಬಳಿಗೆ ಹೋಗು.

ಕುಲಪಾಲಿಕೆ. ಇದೊ ಹೋಗುವೆನು. (ಎಂದು ಪುನಃ ನಿಂತು) ನಿನಗನುರೂಪ ನಾದ ಪತಿಯು ಎಲ್ಲಿಯಾದರೂ ಸಿಕ್ಕಿದನೋ?

ಕುಲಪಾಲಿಕೆ. (ಸಂತೋಷದಿಂದ ನಗುತ್ತ) ಆಃ ಇದು ನಿಶ್ಚಯನೆ?

ಕುಸುಮಪ್ರಭೆ. (ಕೋಪದಿಂದ) ನನಗೆ ಮಾತ್ರವೇ ಅಲ್ಲ. ನಿನಗೂ ಅನುರೂಪ ನಾದ ವರನು ಸಿಕ್ಕಿರುವನು.

ಕುಲಪಾಲಿಕೆ. (ಸಂತೋಷದಿಂದ) ಆಃ! ಇದು ನಿಶ್ಚಯವೆ?

ಕುಸುಮಪ್ರಭೆ. ನಾನು ಯಾವಾಗಲೂ ಸುಳ್ಳಾಡುವುದಿಲ್ಲ.

ಕುಲಪಾಲಿಕೆ. ಹಾಗಾದರೆ ಆತನು ಯಾರು?

ಕುಸುಮಪ್ರಭೆ. ಯಮನು

ಕುಲಪಾಲಿಕೆ. ಸಖಿ! ನಿನಗೆ ಕೋಪವುಂಟಾದಂತೆ ತೋರುವುದು. ನಾನಿನ್ನು ಮಾತ ನಾಡುವುದೇ ಇಲ್ಲ ಇದೊ ಹೊರಟೆ. (ಎಂದು ಸ್ವಲ್ಪದೂರ ಹೋಗಿ ತಿರುಗಿ) ಸಖೀ ಮರೆತಿದ್ದೆ ಇನ್ನೊಂದು ಸಂತೋಷವರ್ತ

ಮಾನವನ್ನು ಕೇಳಿದೆಯೋ ?

ಕುಸುಮಪ್ರಭೆ ಅದೇನು?

ಕುಲಪಾಲಿಕೆ ವಿಲಾಸಚಂದ್ರನು ರಾಜಕುಮಾರನನ್ನು ಸಂಹರಿಸಿದುದರಿಂದ ಅವನಿಗೆ ಮರಣ ದಂಡನೆಯು ವಿಧಿಸಲ್ಪಟ್ಟಿರುವದು. ಉತ್ಪಲೆಗೂ ಅವನಿಗೂ ವಿವಾಹವಾಗುವದಕ್ಕೆ ಮೊದಲೇ ಈ ವಿಷಯವು ನಡೆದುದರಿಂದ ಉತ್ಪಲೆಗೆ ಸಂಭವಿಸುತ್ತಿದ್ದ ವಿಪತ್ತು ಪರಿಹಾರವಾಯಿತು.

ಕುಸುಮಪ್ರಭೆ ಇದು ಸಂತೋಷಕರವೆಂದು ನೀನು ಹೇಳುವೆ. ಉತ್ಪಲೆ ಯಿದನ್ನು ಕೇಳಿ ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕೆಂದು ಯತ್ನಿಸಿರುವಳು.

ಕುಲಪಾಲಿಕೆ ಅಯ್ಯೊ ನಮ್ಮ ಉತ್ಪಲೆಯು ಉನ್ಮತ್ತಳಾದಂತೆ ತೋರುವದು.

ಕುಸುಮಪ್ರಭೆ ಹಾಗಲ್ಲ. ತನ್ನ ಮನೋನಿಶ್ಚಿತಪತಿಯಾದ ವಿಲಾಸಚಂದ್ರನಿಗೆ ಇಂಥಾ ವಿಪತ್ತು ಸಂಭವಿಸಿದುದರಿಂದ ತಾನವನ ಶೋಚನೀಯವಾದ ಮತ್ತೊಂದು ವೃತ್ತಾಂತವನ್ನು ಕೇಳುವದಕ್ಕೆ ಮೊದಲೇ ಲೋಕಾಂತರವನ್ನು ಸೇರಬೇಕೆಂದು ನಿಶ್ಚಯಿಸಿರುವಳು.

ಕುಲಪಾಲಿಕೆ ಅಯ್ಯೋ ವಿಧಿಯೇ! ಇಂಥಾ ದುಷ್ಟನು ತನಗೆ ಪತಿಯಾಗುತ್ತಿದ್ದುದು ತಪ್ಪಿತೆಂದು ಸಂತೋಷಪಡದೇ ಆತ್ಮಹತ್ಯೆಯನ್ನು ಮಾಡಿಕೊಳ್ಳುವಳೆ?

ಕುಸುಮಪ್ರಭೆ ಸಖಿ! ಅವಳ ಆಲೋಚನೆಯು ಯುಕ್ತವಾದದ್ದೇ ಸರಿ. ವಿಲಾಸಚಂದ್ರನಲ್ಲಿ ಅವಳ ಮನಸ್ಸು ಅನುರಕ್ತವಾದುದರಿಂದ ವಿವಾಹವಾದರೂ ಆಗದಿದ್ದರೂ ಅವನೇ ಪತಿಯಲ್ಲವೆ? ಪತಿಯ ವಿಪತ್ತನ್ನು ಕೇಳಿ ಯಾವ ಸ್ತ್ರೀಯು ತಾನೆ ಸೈರಿಸುವಳು?

ಕುಲಪಾಲಿಕೆ ಉತ್ಪಲೆಗೆ ಅವನ ವಿಷಯವನ್ನು ತಿಳಿಸಿದವರು ಯಾರು?

ಕುಸುಮಪ್ರಭೆ. ರಾಜಭಟರು ಬೀದಿಯಲ್ಲಿ ಸಾರುತಾ ಹೋಗುವಾಗ ಉತ್ಪಲೆಯು ಕನ್ಯಾಂತಃಪುರದ ಉಪ್ಪರಿಗೆಯ ಮೇಲೆ ನಿಂತುತಾನೇಕೇಳಿದಳು.

ಕುಲಪಾಲಿಕೆ. ಆದರೆ ಈಗೇನು ಮಾಡೋಣ.?

ಕುಸುಮಪ್ರಭೆ. ಅದನ್ನು ಸಾವಕಾಶದಿಂದ ಆಲೋಚಿಸೋಣ. ನೀನು ಮೊದಲು ಉತ್ಪಲೆಯ ಬಳಿಗೆ ಹೋಗು

ಕುಲಪಾಲಿಕೆ. ಹಾಗೆಯೇ ಆಗಲಿ. ( ಎಂದು ಹೊರಟು ಹೋಗುವಳು )

ಕುಸುಮಪ್ರಭೆ. ಈಗ ನಮ್ಮ ಉತ್ಪಲೆಗೆ ಎಷ್ಟು ವಿಧವಾಗಿ ಹೇಳಿದರೂ ಅವಳು ಬೇರೇ ತನ್ನ ಚಲವನ್ನು ಬಿಡುವಂತೆ ತೋರಲಿಲ್ಲ ಅವಳು ತಾನು ವಿಷ

ಪಾನ ಮಾಡಿ ಪ್ರಾಣವನ್ನು ಕಳೆದುಕೊಳ್ಳಬೇಕೆಂದು ಆಲೋಚಿಸಿ ಎಲ್ಲಿಯಾದರೂ ಸ್ವಲ್ಪ ವಿಷವನ್ನು ತೆಗೆದುಕೊಂಡು ಬರುವಂತೆ ನನ್ನೊಡನೆ ಹೇಳಿದಳು. ನಾನೀಗ ಅವಳಿಗೆ ವಿಷವನ್ನು ತೆಗೆದುಕೊಂಡುಹೋಗಿ ಕೊಡುವುದು ಹೇಗೆ? ವಿಷವೆಲ್ಲಿ ಸಿಕ್ಕುವುದು. ಆತ್ಮಹತ್ಯೆಯು ಮಹಾಪಾತಕವಲ್ಲವೆ? ಇದಕ್ಕೆ ಸಹಾಯಕಾರಿಣಿಯಾದ ನಾನು ರೌರವಾದಿನರಕಯಾತನೆಗೇ ಗುರಿಯಾಗಬೇಕಾಗುವುದಲ್ಲ. ಅವಳಿಗೆ ವಿಷವನ್ನು ಕೊಟ್ಟು ಸಹಾಯಮಾಡಿ ಪಾಪವನ್ನು ಆರ್ಜಿಸುವುದಕ್ಕಿಂತ ನಾನೇ ಆತ್ಮಹತ್ಯೆಯನ್ನು ಮಾಡಿಕೊಂಡು ದೋಷಿಯಾಗುವುದು ಒಳ್ಳೇದು. (ಎಂದು ಚಿಂತಿಸಿ) ಅದು ಸರಿಯಲ್ಲ. ಮೈತ್ರೀಭಾವವೆಲ್ಲಿರುವುದೋ ಅಲ್ಲಿ ಪುಣ್ಯಪಾಪವಿವೇಚನೆಯಿಲ್ಲದೆ ಸಹಾಯಮಾಡಬೇಕಲ್ಲವೆ. ಆದ್ದರಿದ ಈ ವಿಷಯಲ್ಲಿ ನಾನವಳಿಗೆ ಸಹಾಯಮಾಡಲೇ ಬೇಕು (ಎಂದು ಕಣ್ಣೀರುತುಂಬಿ) ಅಯ್ಯೊ! ನನ್ನ ಸಖಿಯು ಮೃತಳಾದರೆ ನಾನು ಹೇಗೆ ಬದುಕಿರಲಿ? ಇದು ಸರಿಯಲ್ಲ. ಅವಳೊಡನೆ ವಿಷಪಾನ ಮಾಡಿ ಸಾಯುವೆನು. (ಎಂದು ಮುಂದೆ ಹೆಜ್ಜೆಯಿಟ್ಟು) ಈತನು ಯಾರು? ಬಹು ಭೀತನಾಗಿರುವಂತೆ ಕಾಣಿಸುವನು.

(ಅನಂತರ ದಿಗ್ಭ್ರಾಂತನಾದ ಅಮರದತ್ತನು ರಾಜಕುಮಾರನೊಡನೆ ಪ್ರವೇಶಿಸಿ)

ಅಮರದತ್ತ — ಅಯ್ಯೊ! ಇನ್ನೇನು ಗತಿ! ನನ್ನ ಮಿತ್ರನಾದ ವಿಲಾಸಚಂದ್ರನಿಗೆ ಮರಣದಂಡನೆಯು ವಿಧಿಸಲ್ಪಟ್ಟಿತಂತೆ. ಮಿತ್ರದ್ರೋಹಿಯಾದ ಕೌಟಿಲ್ಯಶೇಖರನು ವಿಲಾಸಚಂದ್ರನೇ ರಾಜಕುಮಾರನನ್ನು ಸಂಹರಿಸಿದವನೆಂದು ಹೇಳಿ ಅವನಿಗೆ ಈ ಅವಸ್ಥೆಯನ್ನುಂಟು ಮಾಡಿಸಿದನಂತೆ. ಅಯ್ಯೋ ಇಂತಹ ಘಾತುಕರೂ ಲೋಕದಲ್ಲಿರುವರೆ? ಅಸತ್ಯವನ್ನಾಡಿ ತನ್ನ ಮಿತ್ರನನ್ನು ಕೊಲ್ಲಿಸುವುದಕ್ಕೆ ಯತ್ನಿಸಿರುವನಲ್ಲಾ. ಅಥವಾ ನಾವನನ್ನೇಕೆ ನಿಂದಿಸಲಿ. ಪಾಪಿಯಾದ ನಾನು ರಾಜಕುಮಾರನನ್ನು ದ್ರುಹಿಣಪುರದಲ್ಲಿ ರಹಸ್ಯವಾಗಿಟ್ಟುಕೊಂಡಿದ್ದುದರಿಂದಲೇ ಅಲ್ಲವೆ ವಿಲಾಸಚಂದ್ರನಿಗಿಂತಹ ಅವಸ್ಥೆಯುಂಟಾಗಿರುವದು. ಅಯ್ಯೋ ದೈವಾಜ್ಞೆಯಿಂದ ನನ್ನ ಮಿತ್ರನನ್ನು ಇದುವರೆಗೂ ಸಂಹಾರಕರು ಕೊಲ್ಲದಿದ್ದರೆ ಅವನನ್ನು ಬದುಕಿಸಬಹುದು. ಇಲ್ಲವಾದರೆ ನಾನೂ ಅವನ ಮಾರ್ಗವನ್ನೇ ಅನುಸರಿಸುವೆನು. (ಎಂದು

ಮುಂದೆ ಬಂದು) ಎಲಾ! ರಾಜಕುಮಾರನನ್ನು ಸಂಹರಿಸಿದನೆಂಬ ಕಾರಣದಿಂದ ವಿಲಾಸಚಂದ್ರನೆಂಬುವ ಹತಭಾಗ್ಯ ನೊಬ್ಬನಿಗೆ ಮರಣದಂಡನೆಯು ವಿಧಿಸಲ್ಪಡಬೇಕೆಂದು ನ್ಯಾಯಾಧಿಪತಿಯಾಜ್ಞೆ ಯಾಗಿತ್ತಲ್ಲವೆ. ಆತನನ್ನು ಚಂಡಾಲರು ಯಾವಶ್ಮಶಾನಕ್ಕೆ ಕರೆದು ಕೊಂಡು ಹೋಗಿರುವರು ಬೇಗ ಹೇಳು.

ಕುಸುಮಪ್ರಭೆ. (ಸ್ವಗತ) ಇವನೇಕೆ ವಿಲಾಸಚಂದ್ರನ ವಿಷಯವನ್ನುಕುರಿತು ಪ್ರಶ್ನಿಸುವನು? ಇಷ್ಟುಭೀತನಾಗಿರುವುದೇಕೆ? ಒಳ್ಳೇದು ಇದನ್ನು ತಿಳಿಯುವೆನು. (ಎಂದು ಪ್ರಕಾಶಂ) ಅಯ್ಯಾ. ಆ ಘಾತುಕನ ವಿಷಯವು ನಿನಗೇಕೆ?

ಅಮರದತ್ತ ಅವನೆಂಥಾವನಾದರೇನು. ಅವನನ್ನೆಲ್ಲಿಗೆ ಕರೆದುಕೊಂಡು ಹೋಗಿರುವರು ? ಜಾಗ್ರತೆಯಾಗಿ ಹೇಳು.

ಕುಸುಮಪ್ರಭೆ ಅಯ್ಯಾ! ನಾನು ಹೇಳಿದ ಮಾತ್ರವೇ ನೀನೇನು ಮಾಡುವೆ?

ಅಮರದತ್ತ ಚಂಡಾಲರಿಂದ ಅವನಿನ್ನೂ ಹತನಾಗದಿದ್ದರೆ ಬದುಕಿಸುವೆನು

ಕುಸುಮಪ್ರಭೆ ಹಾಗಾದರೆನಡೆ. ನಾನೂ ಅಲ್ಲಿಗೆಬರುವೆನು.

ಅಮರದತ್ತ ನೀನೇಕೆಬರುವೆ?

ಕುಸುಮಪ್ರಭೆ ನೀನೇಕೆ ಹೋಗುವೆ?

ಅಮರದತ್ತ ನನ್ನ ಮಿತ್ರನಿಗೋಸ್ಕರ

ಕುಸುಮಪ್ರಭೆ ನಾನೂ ನನ್ನ ಸಖಿಗೋಸ್ಕರ

ಅಮರದತ್ತ. ನಿನ್ನ ಸಖಿ ಯಾರು?

ಕುಸುಮಪ್ರಭೆ ಮಂತ್ರಿಶ್ರೇಷ್ಠನ ಪುತ್ರಿಯಾದ ಉತ್ಪಲಕುಮಾರಿ.

ಅಮರದತ್ತ ಅವಳಿಗಿಂಥಾ ಅವಸ್ಥೆಯೇಕೆ ಸಂಭವಿಸಿತು ?

ಕುಸುಮಪ್ರಭೆ ನಿನ್ನ ಮಿತ್ರನಿಂದಲೇ.

ಅಮರದತ್ತ. ಏನುಕಾರಣ ?

ಕುಸುಮಪ್ರಭೆ. ಅವಳು ನಿನ್ನ ಮಿತ್ರನಲ್ಲಿ ಅನುರಕ್ತೆಯಾಗಿರುವುದೇ ಕಾರಣ.

ಅಮರದತ್ತ. ಈ ಪ್ರಮಾದಪ್ರಮಾದ. ನನ್ನಿಂದ ಯುವತೀ ಯುವಕರಿಬ್ಬರೂ ಏಕ ಕಾಲದಲ್ಲಿ ಮೃತರಾಗುವರಲ್ಲ! ಎಲಾ ಜಾಗ್ರತೆಯಾಗಿ ವಧ್ಯ ಸ್ಥಾನದ ಮಾರ್ಗವನ್ನು ತೋರಿಸು.

ಕುಸುಮಪ್ರಭೆ ಹೀಗೆ ಬಾ(ಎಂದಿಬ್ಬರೂ ಹೊರಟು ಹೋಗುವರು.)

(ಅನಂತರ ವಧ್ಯನಾದ ವಿಲಾಸಚಂದ್ರನೊಡನೆ ಚಂಡಾಲರೂ ಅರಾತಿಸಿಂಹನೂ ಶಿಲಾವರ್ಮ ಭೀಷಣಕರೂ ಪ್ರವೇಶಿಸುವರು.)

ಅರಾತಿಸಿಂಹ — ವಕ್ರನಾಸನೆ! ಕಾಲವು ಅತಿಕ್ರಮಿಸುತಲಿದೆ, ಬೇಗ ಜಾಗ್ರತೆಮಾಡು.

ವಕ್ರನಾಸ — ಅಪ್ಪಣೆ (ಎಂದು ವಿಲಾಸ ಚಂದ್ರನ ಕಡೆಗೆ ತಿರುಗಿ) ಎಲೈ ವಿಲಾಸಚಂದ್ರನೆ! ನೀನು ಸಾಯುವದಕ್ಕೆ ಸಿದ್ಧನಾಗಿರುವೆಯೊ?

ವಿಲಾಸಚಂದ್ರ — ಅಯ್ಯಾ! ಸಿದ್ಧನಾಗಿಯೇ ಇರುವೆನು.

ಕಂ|| ಪಸಿವಿಂಬಾಯಾರಿಕೆಯಿಂ |
ದಸದಳ ಮಾದಳಲನಾಂತು ನೆರೆ ನವೆಯುತ್ತಂ
ಮಸಣಕೆ ನೆರವಾದೊಡಲಂ |
ರಸೆಯೊಳ್ ಶಾಶ್ವತಮಿದೆಂದು ತಿಳಿವರ್ ಮೂಢರ್|| ೩||

ಎಂದಾದರೂ ಸಾಯಲೇಬೇಕಲ್ಲವೆ?

ಚಿತ್ರನಖ — ಆದರೆ ನೀನು ವ್ಯಸನ ಪಡುತ್ತಿರುವದೇಕೆ?

ವಿಲಾಸಚಂದ್ರ — ಅಯ್ಯಾ ನಾನು ಸಾಯುವುದಕ್ಕೋಸ್ಕರ ವ್ಯಸನಪಡುವುದಿಲ್ಲ ಕೇಳು.

ಕಂ|| ನಾನಾ ಕಾರಣದಿಂದಂ|
ತಾನುಂ ಪ್ರತಿ ದಿನಮು ಮುಪ್ಪಿನಿಯೊಳ್ ಪ್ರಾಣಿಕುಲಂ||
ತಾನೈದುಗುಮಂತಕನಾ|
ಸ್ಥಾನಮನದರಿಂದೆ ಚಿಂತೆಯೇತಕಿದರೊಳ್|| ೪||

ಮತ್ತೇನೆಂದರೆ ನಿಷ್ಕಾರಣವಾಗಿ ಅಪವಾದವನ್ನು ಹೊಂದಿ ಸಾಯುವ ಗತಿಯು ಸಂಭವಿಸಿತೆಂದು ವ್ಯಸನ ಪಡುವೆನು.

ಅರಾತಿಸಿಂಹ — ನೀನು ಮಾಡಿರುವ ಘೋರ ಕೃತ್ಯಕ್ಕೆ ಈ ಶಿಕ್ಷೆಯೂ ಸ್ವಲ್ಪವೇ

ವಿಲಾಸಚಂದ್ರ — ಅಯ್ಯಾ! ನಾನು ಆ ಅಕೃತ್ಯವನ್ನು ಮಾಡಿದವನೋ ಅಲ್ಲವೋ ಎಂಬುದನ್ನು ಆ ಪರಮೇಶ್ವರನೇ ಬಲ್ಲ. ಈಗ ನಾನು ಮಾತನಾಡಿ ಫಲವೇನು? ಇನ್ನು ನಿಮ್ಮ ಕಾರ್ಯವನ್ನು ನಡೆಯಿಸಬಹುದು. (ಎಂದು ಕೈ ಮುಗಿದು)

ಕಂ||ದೇವಾ!ಕನಸಿನೊಳುಂನಾ|
ನೀವಿಧದುಷ್ಕೃತಮನಕಟಬಗೆಯೆನಿದಂ ನೀಂ||
ಭಾವಿಸಿ ದಿಟಮೆಂದೆನ್ನಂ|
ಕಾವುದೆಲೈ ಸಾಂಬ ವಿನತಜನತಾಲಂಬಾ|| ೫||

(ಎಂದು ತಲೆವಾಗಿ ನಿಲ್ಲುವನು)

ಚಿತ್ರಸಖ ಅಯ್ಯೊ! ನೀನು ದೃಢಮನಸ್ಕನಾಗಿದ್ದರೆ ನಿನಗೆ ಹೆಚ್ಚಾದ ಹಿಂಸೆಯಾಗದೆ ಪ್ರಾಣವಾಯುು ಹಾರಿ ಹೋಗುವದು. ಆದ್ದರಿಂದ ಸರಿಯಾಗಿ ನಿಲ್ಲು. (ಎಂದು ಖಡ್ಗವನ್ನು ಒರೆಯಿಂದೆಳೆದು) ಆಃ ಇದೇನು? ನನ್ನ ಕೈ ನಡುಗುವುದು. ಜನ್ಮಾರಭ್ಯ ಇದೇ ಕಾರ್ಯದಲ್ಲಿರುವ ನನಗೆ ಕೊಲ್ಲುವುದೆಂದರೆ ಲಕ್ಷ್ಯವೇ ಇಲ್ಲ. ಈಗ ನನ್ನ ಮನಸ್ಸು ಹಿಂತೆಗೆಯುತ್ತಿರುವುದಕ್ಕೆ ಕಾರಣವೇನು? ಹೇಗಾದರೂ ಆಗಲಿ. (ಎಂದು ಮೇಲೆ ನೋಡಿ)

ಕಂ|| ವಿಪರೀತಮಿದೇತಕೀತವ|
ನಪರಾಧಿಯೊ ನಿರಪರಾಧಿಯೋ ತಿಳಿಯೆಂ ನಾಂ||
ನೃಪನಾಜ್ಞೆಗಧೀನಂ ಮ|
ನ್ನಿಪುದೈ ನೀನಾರ್ತ ರಕ್ಷ ಸದಯಕಟಾಕ್ಷಾ||೭||

(ಎಂದು ವಿಲಾಸಚಂದ್ರನ ಮೇಲೆ ಖಡ್ಗವನ್ನೆತ್ತುವನು)
(ತೆರೆಯಲ್ಲಿ)
ಅಯ್ಯೊ ಈತನನ್ನು ಕೊಲ್ಲಬೇಡ ಕೊಲ್ಲಬೇಡ.

ಚಿತ್ರಸಖ (ಆಶ್ಚರ್ಯದಿಂದ) ಇದೇನು ಹೀಗೆ ಕೂಗುವವರು ಯಾರು?

ಅರಾತಿಸಿಂಹ (ತೆರೆಯ ಕಡೆ ನೋಡಿ) ಇವರು ಯಾರು? ಇಷ್ಟು ಜಾಗ್ರತೆಯಾಗಿ ಇತ್ತ ಕಡೆ ಬರುತ್ತಿರುವರು?

ಅಮರದತ್ತ ಅಯ್ಯೊ ಇವನನ್ನು ಕೊಲ್ಲಬೇಡ ಕೊಲ್ಲಬೇಡ. (ಎಂದು ಕೂಗುತ್ತಾ ಕುಸುಮಪ್ರಭಾ ಧೀರವರ್ಮರೊಡನೆ ಪ್ರವೇಶಿಸಿ)

ಕಂ|| ಇಂದೆನ್ನ ಸಖನ ದರ್ಶನ|
ದಿಂದಾದುದು ನಯನ ಕುತ್ಸವಂ ಹೃದಯದೊಳಾ||
ನಂದರಸಂ ಪರಿದುದುಮೇ|
ಣಿಂದೆನ್ನಯ ಜನ್ಮಮಾಯ್ತು ಸಾರ್ಥಕಮಿ ಯೊಳ್ ||೭||

(ಎಂದು ವಿಲಾಸಚಂದ್ರನನ್ನು ಆಲಿಂಗಿಸುವನು)

ವಿಲಾಸಚಂದ್ರ (ಲಜ್ಜೆಯಿಂದ ತಲೆಬಾಗಿ ಅಯ್ಯೊ! ಮಿತ್ರದ್ರೋಹಿಯಾಗಿ ನಿನಗೆ ಅಹಿತವನ್ನೇ ಕೋರುತ್ತಿದ್ದ ನನ್ನನ್ನು ನೀನೇಕೆ ಬದುಕಿಸಬೇಕೆಂದು ಪ್ರಯತ್ನಿಸಿರುವೆ?

ಅಮರದತ್ತ ಮಿತ್ರನೆ! ಅದು ನಿನ್ನ ದೋಷವಲ್ಲ. ನೀನು ಮನಃಪೂರ್ವಕವಾಗಿ ನನಗೆ ಅಹಿತವನ್ನಾಚರಿಸಿದವನಲ್ಲ.

ಅರಾತಿಸಿಂಹ ಅಯ್ಯಾ! ನೀನು ಯಾರು? ಇವನನ್ನು ಕೊಲ್ಲಬೇಡವೆಂದು ಹೇಳುವುದಕ್ಕೆ ಕಾರಣವೇನು?

ಅಮರದತ್ತ ನಾನು ಯಾರಾದರೇನು? ನಿರಪರಾಧಿಯಾದವನನ್ನು ಕೊಲ್ಲಕೂಡದು.

ಅರಾತಿಸಿಂಹ ನಿರಪರಾಧಿಯೆಂದು ಹೇಗೆ ಹೇಳುವೆ?

ಅಮರದತ್ತ ಇವನು ಅಪರಾಧಿಯೆಂದು ನೀನು ಹೇಗೆ ಹೇಳುವೆ?

ಅರಾತಿಸಿಂಹ. ರಾಜಕುಮಾರನಾದ ಧೀರವರ್ಮನನ್ನಿವನು ಸಂಹರಿಸಿರುವುದರಿಂದಲೇ ಅಪರಾಧಿಯಾದನು.

ಅಮರದತ್ತ (ಅಲಕ್ಷ್ಯದಿಂದ ನಗುತ್ತಾ) ಓಹೋ ಹಾಗಾದರೆ ಇವನು ರಾಜಕುಮಾರನನ್ನು ಸಂಹರಿಸಿರುವುದಕ್ಕೆ ತಕ್ಕನಿದರ್ಶನ ವೇನಿರುವುದು?

ಅರಾತಿಸಿಂಹ ನ್ಯಾಯಾಧಿಪತಿಯಾದ ಸಮರ್ಥಕನೇ ನಿದರ್ಶನವಲ್ಲವೆ?

ಅಮರದತ್ತ ಏನು ! ಸಮರ್ಥಕನು ಕಂಡನೊ ?

ಅರಾತಿಸಿಂಹ ಅಲ್ಲ. ಆತನೊಡನೆ ಕೌಟಿಲ್ಯಶೇಖರನೆಂಬುವನು ತಾನೇ ನೋಡಿದೆನೆಂದು ಹೇಳಿ ಕೆಲವು ನಿದರ್ಶನಗಳನ್ನು ಕೊಟ್ಟಿರುವನು.

ಅಮರದತ್ತ ಕೌಟಿಲ್ಯಶೇಖರನ ಮಾತಿನಿಂದ ಇವನು ಅಪರಾಧಿಯೆಂದು ನಿರ್ಧರಿಸಲ್ಪಟ್ಟಿತಲ್ಲವೆ?

ಅರಾತಿಸಿಂಹ ಇದರಲ್ಲಿ ಸಂಶಯವೇನು?

ಅಮರದತ್ತ ಈಗ ಇವನು ನಿರ್ದೋಷಿಯೆಂದು ನಾನು ಹೇಳುವೆನು ಆದ್ದರಿಂದ ಇವನನ್ನು ಬಿಟ್ಟುಬಿಡು.

ಅರಾತಿಸಿಂಹ ನಿರ್ದೋಷಿಯೆಂಬುದು ವ್ಯಕ್ತವಾಗದೇ ಬಿಡಲಾರೆ.

ಅಮರದತ್ತ (ಕುಸುಮಪ್ರಭೆಯ ಕಡೆ ತಿರುಗಿ) ಎಲೌ! ಕುಮಾರನನ್ನು ಹೀಗೆ ಕರೆದುಕೊಂಡು ಬಾ.

ಕುಸುಮಪ್ರಭೆ ಎಲೈ! ಆಯುಷ್ಮಂತನೆ ಹೀಗೆ ಬಾ. ಎಂದು ರಾಜಕುಮಾರನನ್ನು ಮುಂದೆ ಕರೆತರುವಳು.

ಅಮರದತ್ತ ಅಯ್ಯಾ! ಈ ಕುಮಾರನು ಯಾರು ಬಲ್ಲೆಯೊ?

ಅರಾತಿಸಿಂಹ ಧೀರವರ್ಮನನ್ನು ಕಂಡು ಸಂತೋಷದಿಂದ ಆಃ ಈತನೇ ನಮ್ಮ ಯುವರಾಜನಾದ ಧೀರವರ್ಮನು.

ಅಮರದತ್ತ ಈಗಲಾದರೂ ವಿಲಾಸಚಂದ್ರನು ನಿರ್ದೋಷಿಯೆಂದು ವ್ಯಕ್ತವಾಯಿತೆ?

ಅರಾತಿಸಿಂಹ ಇದರಲ್ಲಿ ಸಂದೇಹವೇಕೆ? (ಎಂದು ಚಂಡಾಲರ ಕಡೆ ತಿರುಗಿ) ಎಲೈ ಚಿತ್ರನಖ ವಕ್ರನಾಸರಾ! ನೀವೀತನನ್ನು ಕೊಲ್ಲಕೂಡದು. ನಾನೀ ವಿಷಯವನ್ನು ಮಂತ್ರಿಶ್ರೇಷ್ಠನಿಗೆ ಅರಿಕೆ ಮಾಡಿ ಜಾಗ್ರತೆಯಾಗಿ ಬರುವೆನು. (ಎಂದು ಅಮರದತ್ತನಕಡೆ ತಿರುಗಿ) ಅಯ್ಯಾ! ನಿನ್ನಹೆಸರೇನು?

ಅಮರದತ್ತ ಅಮರದತ್ತನೆಂದು.

ಅರಾತಿಸಿಂಹ ಒಳ್ಳೇದು ನಾನು ಹೋಗಿಬರುವವರೆಗೂ ಇಲ್ಲಿಯೇ ಇರು. (ಎಂದು ಹೊರಟು ಹೋಗುವನು.)

ಅಮರದತ್ತ ಮಿತ್ರನೇ! ವಿಲಾಸಚಂದ್ರನೇ ! ಆ ನೀಚನಾದ ಕೌಟಿಲ್ಯಶೇಖರ ನಿಂದ ಇಂಥಾ ಪ್ರಮಾದವು ಸಂಭವಿಸೀತೆಂದು ನಾನು ಮೊದಲೇ ಹೇಳಿರಲಿಲ್ಲವೆ!

ವಿಲಾಸಚಂದ್ರ (ಮಾತಾಡದೇ ಸುಮ್ಮನಿರುವನು.)

ಅಮರದತ್ತ. ನಡೆದುಹೋದ ವಿಷಯಕ್ಕೆ ಈಗ ವ್ಯಸನಪಟ್ಟು ಫಲವಿಲ್ಲ. ಇದೊ ಆದುಷ್ಟನ ಮತ್ತೊಂದು ಸಾಹಸ ಕಾರ್ಯವನ್ನು ನೋಡು (ಎಂದು ಪತ್ರಿಕೆಯನ್ನು ಕೊಡುವನು.)

ವಿಲಾಸಚಂದ್ರ ಅಯ್ಯಾ! ಇದವನ ದೋಷವಲ್ಲ. ಅವನಲ್ಲಿ ವಿಶ್ವಾಸವನ್ನಿಟ್ಟ ನಾನೇ ಇದಕ್ಕೆ ಕಾರಣವಲ್ಲವೆ?

(ಚಾರನ ಪ್ರವೇಶ)

ಚಾರ ಅಯ್ಯಾ ವಧಕರೆ! ನೀವು ವಿಲಾಸಚಂದ್ರನನ್ನು ಬಿಟ್ಟು ಮನೆಗೆ ಹೊರಟು ಹೋಗತಕ್ಕದೆಂದು ಸೇನಾಧಿಪತಿಯ ಆಜ್ಞೆಯಾಗಿರುವುದು. ಮಂತ್ರಿಶ್ರೇಷ್ಠನು ನಿಮಗೀಪಾರಿತೋಷಕವನ್ನು ಕೊಟ್ಟಿರುವನು. (ಎಂದು ಕೆಲವಾಭರಣಗಳನ್ನು ಕೊಟ್ಟು) ಅಯ್ಯಾ! ಅಮರದತ್ತನೆಂಬುವನು ನೀನೆಯೊ?

ಅಮರದತ್ತ ಅಹುದು.

ಚಾರ ಕುಮಾರಧೀರವರ್ಮ ಸಮೇತನಾದ ನಿನ್ನನ್ನು ಈ ವಿಲಾಸಚಂದ್ರ ನೊಡನೆ ಕರೆತರಬೇಕೆಂದು ಮಂತ್ರಿಯಾಜ್ಞಾಪಿಸಿರುವನು

ಅಮರದತ್ತ ಮಂತ್ರಿಯಾಜ್ಞೆಯನ್ನು ಶಿರಸಾವಹಿಸಿದೆನು. (ಎಂದು ಧೀರವರ್ಮ ನನ್ನೆತ್ತಿಕೊಂಡು ವಿಲಾಸಚಂದ್ರನೊಡನೆ ಚಾರನ ಹಿಂದೆ ಹೊರಟು ಹೋಗುವನು.)

ಕುಸುಮಪ್ರಭೆ. ನಾನೀ ಸಂತೋಷ ವರ್ತಮಾನವನ್ನು ಸಖಿಯಾದ ಉತ್ಪಲೆಗೆ ತಿಳಿಸುವೆನು. (ಎಂದು ಹೊರಟು ಹೋಗುವಳು)

(ಅನಂತರ ನಿರ್ಜರಕನೂ ಅರಾತಿಸಿಂಹನೂ ಪ್ರವೇಶಿಸುವರು)

ನಿರ್ಜರಕ ಅಯ್ಯಾ! ಈಗ ಆ ಕೌಟಿಲ್ಯಶೇಖರನನ್ನು ಕರೆಯಿಸು.

ಅರಾತಿಸಿಂಹ ಆಗಲೇ ಶಿಲಾವರ್ಮನನ್ನು ಕಳುಹಿಸಿರುವೆನು.

ನಿರ್ಜರಕ ಆ ದುಷ್ಟನಿಂದ ನಿರ್ದೋಷಿಯು ಮೃತನಾಗುತ್ತಿದ್ದನಲ್ಲಾ. ಎಲೈ ಅರಾತಿಸಿಂಹನೆ! ನಾನು ಮಹಾರಾಜನಿಗೀವಿಷಯವನ್ನೆಲ್ಲಾ ತಿಳಿಸುವೆನು. ನೀನು ಕುಮಾರನೊಡನೆ ಅಮರದತ್ತ ವಿಲಾಸಚಂದ್ರರಿಬ್ಬರನ್ನೂ ಅಲ್ಲಿಗೆ ಕರೆದುಕೊಂಡು ಬಾ. (ಎಂದು ಮುಂದೆ ಹೋಗಿ) ಇದೊ ಅವರೇ ಬರುತ್ತಿರುವರು.

(ಅನಂತರ ವಿಲಾಸಚಂದ್ರ ಧೀರವರ್ಮರೊಡನೆ ಅಮರದತ್ತನು ಪ್ರವೇಶಿಸುವನು)

ನಿರ್ಜರಕ ಅಯ್ಯಾ! ಅಮರದತ್ತನೇ! ನೀನಿಲ್ಲಿಯೇ ಇರು. ದೇವಿಯು ಪುತ್ರವಿಯೋಗದಿಂದ ಕ್ಲೇಶಪಡುತ್ತಿರುವಳು ಆದ್ದರಿಂದ ನಾನು ಕುಮಾರನನ್ನು ರಾಜವಾಸಕ್ಕೆ ಮೊದಲು ಕರೆದುಕೊಂಡು ಹೋಗುವೆನು.

ಅಮರದತ್ತ ಆಗಬಹುದು.

ನಿರ್ಜರಕ ಅಯ್ಯಾ! ಅರಾತಿಸಿಂಹನೇ! ನೀನೇ ಹೋಗಿ ಆ ಕೌಟಿಲ್ಯಶೇಖರನನ್ನು ಕರೆತರಬೇಕು. (ಎಂದು ರಾಜಕುಮಾರನನ್ನೆತ್ತಿಕೊಂಡು ಹೊರಟು ಹೋಗುವನು)

ಅರಾತಿಸಿಂಹ ಈಗ ನಾನು ಹೋಗಿ ಆ ನೀಚನನ್ನು ಹಿಡಿದು ತರುವೆನು. (ಎಂದು ಹೊರಟು ಹೋಗುವನು)

ಅಮರದತ್ತ ಮಿತ್ರನೆ! ನೀನೇಕೆ ಈಗಲೂ ಖಿನ್ನನಾಗಿರುವೆ?

ವಿಲಾಸಚಂದ್ರ ನಿನ್ನಂಥ ಮಿತ್ರನಿರುವಾಗ ನನಗೆ ಖಿನ್ನತೆಯೇಕೆ?

ಅಮರದತ್ತ ಆಃ ನಿನ್ನ ಮನೋವ್ಯಥೆಯನ್ನು ನಾನು ಕಾಣೆನೆ?

ವಿಲಾಸಚಂದ್ರ

ಕಂ|| ನಿನ್ನಯ ದರ್ಶನ ಸುಖಮಂ|
ಮನ್ನಯನಂ ತಾಳ್ದುದಪಯಶೋದ್ಭವಮಾದ ||
ಖಿನ್ನತೆ ಮೈಗರೆದುದು ತಾ|
ನಿನ್ನೇಂ ವ್ಯಥೆ ಯೆನ್ನ ಮನಕೆ ಪೇಳೆಲೆ ಕೆಳೆಯಾ||೮||

ಅಮರದತ್ತ. ಮಿತ್ರನೇ! ನನ್ನೊಡನೆಯೂ ತಿಳಿಸಬಾರದೇ.

ವಿಲಾಸಚಂದ್ರ. ಯಾವುದನ್ನು ತಿಳಿಸಲಿ?

ಅಮರದತ್ತ. ನಿನ್ನ ಮನಸ್ಸಿನಲ್ಲಿರುವುದನ್ನು.

ವಿಲಾಸಚಂದ್ರ. ನಾನು ಯಾವುದನ್ನೂ ಯೋಚಿಸಲಿಲ್ಲ.

ಅಮರದತ್ತ. ಇದು ನಿಶ್ಚಯವೆ ?

ವಿಲಾಸಚಂದ್ರ. ಸಂದೇಹವೇಕೆ

ಅಮರದತ್ತ ಉತ್ಪಲಕುಮಾರಿಯ ವಿಷಯವೇನು.

ವಿಲಾಸಚಂದ್ರ. (ನಿಟ್ಟುಸಿರುಬಿಟ್ಟು) ಹತಭಾಗ್ಯನಾದ ನನಗೆ ಅವಳ ವಿಷಯವೇಕೆ?

ಅಮರದತ್ತ. ನಾನು ಬದುಕಿರುವವರೆಗೂ ನೀನು ಭಾಗ್ಯಶಾಲಿಯೇ ಸರಿ- ಈ ವಿಷಯದಲ್ಲಿ ನಿನ್ನಂತೆಯೇ ಅವಳೂ ವ್ಯಥೆಪಡುತ್ತಿರುವಳೆಂದು ಅವಳ ಸಖಿಯಿಂದ ತಿಳಿದೆನು. ಈಗ ನಿರ್ಜರಕನೇ ನಿಮ್ಮಿಬ್ಬರಿಗೂ ವಿವಾಹವನ್ನು ಮಾಡುವಂತೆ ನಾನು ಪ್ರಾರ್ಥಿಸವೆನು.

ವಿಲಾಸಚಂದ್ರ. ಇದು ಸಾಧ್ಯವೆ ?

ಅಮರದತ್ತ. ಮನುಷ್ಯನಿಗೆ ಅಸಾಧ್ಯವಾದುದು ಯಾವುದು ಅದರಲ್ಲಿಯೂ ಸತ್ಯವಂತನಿಗೆ ಸಕಲವೂ ಸಾಧ್ಯವೇ ಅಲ್ಲವೆ

ವೈತಳಿಕರು. (ತೆರೆಯಲ್ಲಿ) ಕಂ॥ ಸರಸಿಜದಿಂ ತಿಳಿಗೊಳನುಂ ।
ಹರಿಣಾಂಕನಿನಂತರಿಕ್ಷಮುಂ ಬಗೆಗೊಳ್ವಾ ॥
ನರುಗಂಪಿಂ ಮಲ್ಲಿಗೆಯುಂ
ಮೆರೆವಂತಿರೆ ಸುಜನನೊಂದಿ ನೆರೆ ಮೆರೆ ನೃಪತೀ ॥೯॥

ಅಮರದತ್ತ ಮಿತ್ರನೆ! ಮಹಾರಾಜನಾದ ವಿಕ್ರಮಕೇಸರಿಯು ಪರಿವಾರಸಮೇತನಾಗಿ ಬರುತ್ತಿರುವನು.

(ಅನಂತರ ಪರಿವಾರಸಹಿತನಾದ ವಿಕ್ರಮಕೇಸರಿಯೂ ನಿರ್ಜರಕನೂ ಪ್ರವೇಶಿಸುವರು)

ವಿಲಾಸಚಂದ್ರ ಅಮರದತ್ತರಿಬ್ಬರೂ—ಮಹಾರಾಜನಿಗೆ ವಿಜಯವಾಗಲಿ,

ವಿಕ್ರಮಕೇಸರಿ (ಅಮರದತ್ತನೊಡನೆ) ಎಲೈ ಅಮರದತ್ತನೆ! ನಿನ್ನ ದೆಸೆಯಿಂದ ಅಮಂಗಳವೆಲ್ಲಾ ಪರಿಹಾರವಾಯಿತು. ನಿನ್ನ ಉಪಕಾರಕ್ಕೆ ನಾವೆಷ್ಟು ಕೃತಜ್ಞರಾಗಿದ್ದರೂ ಸಾಲದು.

ಅಮರದತ್ತ (ತಲೆವಾಗಿ) ನನ್ನ ಕರ್ತವ್ಯವನ್ನು ನಾನು ಮಾಡಿರುವೆನಲ್ಲದೆ ಮತ್ತೆ ಬೇರೆಯಿಲ್ಲ.

ವಿಕ್ರಮಕೇಸರಿ. ಅಯ್ಯಾ! ನಿನ್ನಂತಹ ಮಿತ್ರನನ್ನು ಹೊಂದಿರುವ ಈ ವಿಲಾಸಚಂದ್ರನಲ್ಲವೆ ಲೋಕವಂದ್ಯನು! ಅದಿರಲಿ, ಈ ಅನಾಯಕತ್ಕೆ ಕಾರಣವೇನು ಬಲ್ಲೆಯೊ?

ಅಮರದತ್ತ ಮಹಾರಾಜನೆ! ನೀಚನಾದ ಕೌಟಿಲ್ಯಶೇಖರನೇ ಇದಕ್ಕೆ ಕಾರಣ.

ವಿಕ್ರಮಕೇಸರಿ ಅದು ಹೇಗೆ?

ಅಮರದತ್ತ ರಾಜಕುಮಾರನನ್ನು ಅವನೇ ಪುಷ್ಕರೋದ್ಯಾನದಿಂದಪಹರಿಸಿ ಕೊಂಡು ಹೋದವನು ವಿಮಲಾನದಿಯ ತೀರದಲ್ಲಿ ನಾನು ಹೋಗುತ್ತಿದ್ದಾಗ ರಾಜಕುಮಾರನು ಅಳುತ್ತಿರಲು ನಾನಲ್ಲಿಗೆ ಹೋಗಿ ಕುಮಾರನನ್ನು ಸಂತೈಸಿದೆನು. ಕುಮಾರನ ಬಳಿಯಲ್ಲಿ ಈ ವಸ್ತ್ರವು ಬಿದ್ದಿತ್ತು. ಇದರಿಂದಲೇ ಕೌಟಿಲ್ಯಶೇಖರನ ಕೃತ್ಯವೆಂದು ಹೇಳಬಲ್ಲೆನು. ಇದೂ ಅಲ್ಲದೆ ಬಂಧುರುಕನೆಂಬ ನನ್ನ ಭೃತ್ಯನನ್ನು ಗೂಢಚಾರನಂತೆ ಅವನ ಬಳಿಯಲ್ಲಿ ಬಿಟ್ಟಿರುವೆನು. ಅವನೂ ಈ ನೀಚನ ಕೃತ್ಯಗಳನ್ನೆಲ್ಲಾ ನನಗೆ ತಿಳಿಸಿರುವನು.

ವಿಕ್ರಮಕೇಸರಿ. ವಿಲಾಸಚಂದ್ರನಿಗೂ ಅವನಿಗೂ ದ್ವೇಷವೇಕೆ?

ಅಮರದತ್ತ. ಅವನಿಗೆ ಯಾರೊಡನೆ ತಾನೇ ದ್ವೇಷವಿಲ್ಲ.

ವಿಕ್ರಮಕೇಸರಿ. ನಿಷ್ಕಾರಣವಾಗಿ ದ್ವೇಷವೇ?

ಅಮರದತ್ತ. ಇದೋ ಪರಾಮರ್ಶಿಸಬೇಕು. (ಎಂದು ಮಧುಮತಿಗೆ ಬರೆದಿದ್ದ ಪತ್ರಿಕೆಯನ್ನು ಕೊಡುವನು)

ವಿಕ್ರಮಕೇಸರಿ. (ಅದನ್ನೋದಿಕೊಂಡು) ವೇಶ್ಯೆಯೂ ಅವನಿಗೆ ಸಹಾಯಕಾರಿಣಿಯೋ!

ಅಮರದತ್ತ. ಮಹಾರಾಜನೇ! ವೇಶ್ಯೆಯರು ಯಾರಿಗೆ ತಾನೆ ಸಹಾಯಕಾರಿಣಿಯರಲ್ಲ! (ಎಂದು ತಿರುಗಿನೋಡಿ) ಇದೊ ಆದುಷ್ಟನನ್ನು ಕರೆತರುತ್ತಿರುವರು (ಅನಂತರ ಶಿಲಾವರ್ಮಭೀಷಣಕರೂ ಅರಾತಿಸಿಂಹನೂ ಕೌಟಿಲ್ಯಶೇಖರನನ್ನು ಕರೆತರುವರು)

ವಿಕ್ರಮಕೇಸರಿ. ಎಲೈ. ನಿರ್ಜರಕನೇ! ನಾವಿವನನ್ನು ವಿಚಾರಮಾಡತಕ್ಕ ಅವಶ್ಯಕವಿಲ್ಲವಷ್ಟೆ?

ನಿರ್ಜರಕ. ಇವನ ದೋಷಗಳೆಲ್ಲಾ ನಮಗೆ ಪ್ರತ್ಯಕ್ಷವಾಗಿಯೇ ಇರುವುದರಿಂದ ವಿಚಾರಿಸುವುದೇಕೆ. ವಿಲಾಸಚಂದ್ರನಿಗೆ ವಿಧಿಸಿದ್ದ ಶಿಕ್ಷೆಯನ್ನೇ ಈ ನೀಚನಿಗೂ ವಿಧಿಸಬೇಕು.

ವಿಲಾಸಚಂದ್ರ ಮಹಾರಾಜನೆ! ಇವನು ಮರಣದಂಡನೆಗರ್ಹನಲ್ಲ.

ವಿಕ್ರಮಕೇಸರಿ ಅಯ್ಯಾ! ವಿಲಾಸಚಂದ್ರನೇ! ಈ ವಸ್ತ್ರದಿಂದಲೂ ಈ ನೀಚನು ಮಧುಮತಿಯೆಂಬವಳಿಗೆ ಬರೆದಿರುವ ಈ ಪತ್ರಿಕೆಯಿಂದಲೂ

ಮತ್ತೂ ಇವನು ವ್ಯವಹಾರಸ್ಥಾನದಲ್ಲಿ ತನ್ನ ದೋಷವನ್ನು ನಿನ್ನ ಮೇಲೆ ಆಪಾದನಮಾಡಿರುವುದರಿಂದಲೂ ಈ ಪ್ರಮಾದವೆಲ್ಲಾ ಇವನಿಂದಲೇ ಸಂಭವಿಸಿರುವುದು. ಆದ್ದರಿಂದ ಇವನಿಗೆ ಪ್ರಾಣಾಂತ ದಂಡನೆಯನ್ನೇ ವಿಧಿಸಬೇಕು.

ವಿಲಾಸಚಂದ್ರ. ಮಹಾರಾಜನೆ! ನ್ಯಾಯಶಾಸ್ತ್ರವಾದರೋ

ಕಂ|| ಮಲೆವಾಶಿಶುಘಾತುಕರುಂ|
ಲಲನಾ ಘಾತುಕರು ಮೈದೆ ನರಘಾತುಕರುಂ||
ಸಲೆಪಶುಘಾತುಕರುಂ ಮೇ|
ಣಿಳೆಯೊಳ್ತಾಂ ಮರಣದಂಡನಾರ್ಹರೆನಿಪ್ಪರ್ ||೧೫||

ಎಂದು ಹೇಳುವುದರಿಂದ ಈತನು ಅಂಥಾ ಅಪರಾಧವನ್ನು ಮಾಡಿದವನಲ್ಲವಷ್ಟೆ.

ನಿರ್ಜರಕ ಅಯ್ಯಾ ಹಾಗಲ್ಲ. ಇವನ ವಿಪತ್ಕರವಾದ ಕೃತ್ಯದಿಂದ ರಾಜಕುಮಾರನೂ ನೀನೂ ಇಬ್ಬರೂ ಮೃತರಾಗುತ್ತಿದ್ದಿರಲ್ಲವೆ ? ಆದ್ದರಿಂದ ಇವನು ಮರಣದಂಡನೆಗೇ ಅರ್ಹನು.

ವಿಲಾಸಚಂದ್ರ ಈಗ ಅಂಥಾ ಅನಾಹುತವಾವುದೂ ನಡೆಯಲಿಲ್ಲ. ಮತ್ತೂ ಈ ಮಹೋತ್ಸವಸಮಯದಲ್ಲಿ ನ್ಯಾಯಶಾಸ್ತ್ರಾನುಸಾರ ಮರಣ ದಂಡನೆಗರ್ಹರಾದವರನ್ನೂ ಕ್ಷಮಿಸುವ ಪದ್ಧತಿ ಇರುವದರಿಂದ ಈತನ ಅಪರಾಧವನ್ನೂ ಕ್ಷಮಿಸಬೇಕಲ್ಲವೆ?

ಅಮರದತ್ತ. ಮಹಾರಾಜನೇ! ಇವನು ಮುಕ್ತಾಸರವನ್ನು ಅಪಹಂಸಿರುವನಾದ್ದರಿಂದ ಮರಣದಂಡನೆಗೆ ಹೇಗೆ ಅರ್ಹನಾದಾನು.

ವಿಕ್ರಮಕೇಸರಿ. (ಆಲೋಚಿಸಿ) ಎಲೈ ನಿರ್ಜರಕನೇ! ಇವರು ಹೇಳುವುದು ಯುಕ್ತವಾಗಿ ತೋರುವುದು. ಈ ದುಷ್ಟನಿಗೆ ಹಸ್ತಚ್ಛೇದನವನ್ನು ವಿಧಿಸಿರುವೆನು. (ಎಂದು ಅರಾತಿಸಿಂಹನೊಡನೆ) ಎಲೈ ಸೈನ್ಯಾಧಿಪತಿಯೇ! ಇವನಿಗೆ ಹಸ್ತವನ್ನು ಛೇದಿಸುವುದಲ್ಲದೆ ವಿಲಾಸಚಂದ್ರನ ವಿಷಯದಲ್ಲಿ ಅಸತ್ಯವನ್ನಾಡಿರುವ ಅಮಧುಮತಿಯೆಂಬ ವೇಶ್ಯೆಯನ್ನು ನಮ್ಮ ರಾಜಧಾನಿಯಿಂದ ಹೊರಗೆಕಳುಹಿಸು.

ಅರಾತಿಸಿಂಹ. ಅಪ್ಪಣೆಯಾದಂತೆ ನಡೆಯಿಸುವೆನು. (ಎಂದು ಕೌಟಿಲ್ಯಶೇಖರನನ್ನು ಶಿಲಾವರ್ಣ ಭೀಷಣಕರೊಡನೆ ಕರೆದುಕೊಂಡು ಹೋಗುವನು)

ವಿಕ್ರಮಕೇಸರಿ. ಅಯ್ಯಾ! ಅಮರದತ್ತನೇ! ನಿನ್ನ ಸಾಹಸದಿಂದ ನನಗೆ ಸಂಭವಿಸು

ತ್ತಿದ್ದ ಅಪಯಶಸ್ಸೂ ಪಾಪವೂ ನಿವಾರಣೆಯಾಗಿ ಕುಲದೀಪಕನಾದ ಪುತ್ರನನ್ನು ಪುನಃ ಪಡೆದೆನು. ನಿನ್ನ ಮನೋರಥ ವೇನಿರುವುದೊ ಅದನ್ನು ತಿಳಿಸಿದರೆ ಈಗಲೇ ನಡೆಯಿಸಿಕೊಡುವೆನು.

ಅಮರದತ್ತ. (ಸುಮ್ಮನಿರುವನು)

ವಿಕ್ರಮಕೇಸರಿ. ಅಯ್ಯಾ! ನೀನು ಸಂದೇಹಪಡಬೇಡ. ನನ್ನ ರಾಜ್ಯವನ್ನೇ ಅಪೇಕ್ಷಿಸಿದರೂ ಕೊಡುವೆನು.

ಅಮರದತ್ತ. ಮಹಾರಾಜನೇ! ನನ್ನ ಮಿತ್ರನ ಮನೋರಥವನ್ನು ನಡೆಯಿಸಿಕೊಟ್ಟರೆ ನನ್ನ ಮನೋರಥವು ಸಫಲವಾಗುವುದು.

ವಿಕ್ರಮಕೇಸರಿ ಅದೇನು?

ಅಮರದತ್ತ. ಮಂತ್ರಿಶ್ರೇಷ್ಠನ ಪುತ್ರಿಯಾದ ಉತ್ಪಲೆಯೂ ನನ್ನ ಮಿತ್ರನೂ ಪರಸ್ಪರಾನುರಕ್ತರಾಗಿರುವರು. ಆದ್ದರಿಂದ ಅವರಿಬ್ಬರಿಗೂ ವಿವಾಹವನ್ನು ಮಾಡಿಸಬೇಕೆಂದು ಪ್ರಾರ್ಥಿಸುವೆನು.

ನಿರ್ಜರಕ. (ಆಶ್ಚರ್ಯದಿಂದ) ಏನು! ನಮ್ಮ ಕುಮಾರಿಯು ಈ ವಿಲಾಸಚಂದ್ರನಲ್ಲಿ ಅನುರಕ್ತಳಾಗಿರುವಳೇ?

ಅಮರದತ್ತ. ಈ ಉಂಗುರವನ್ನು ಪರಾಮರ್ಶಿಸಬಹುದು. (ಎಂದು ಕೊಡುವನು)

ವಿಕ್ರಮಕೇಸರಿ. (ಅದನ್ನು ತೆಗೆದುಕೊಂಡು) ಈ ಮೊದಲೇ ಗಾಂಧರ್ವ ವಿವಾಹವು ನಡೆದಿರುವಂತೆ ತೋರುವುದು. ಅಯ್ಯೋ! ಈತನನ್ನು ಸಂಹರಿಸಿದರೆ ನಾವು ಘೋರಪಾತಕಕ್ಕೊಳಗಾಗುತ್ತಿದ್ದುದಲ್ಲದೆ ನಮ್ಮ ಕುಮಾರಿಗೂ ಅಶಕ್ಯವಾದ ವಿಪತ್ತು ಸಂಭವಿಸುತ್ತಿತ್ತು (ಎಂದು ನಿರ್ಜರಕನೊಡನೆ.) ಎಲೈ! ನಿರ್ಜರಕನೇ! ನಿನ್ನ ಅಭಿಪ್ರಾಯವೇನು.

ನಿರ್ಜರಕ. ಸ್ವಾಮಿಯಾಜ್ಞಾನುವರ್ತಿಯಾದ ನನ್ನ ಸರ್ವಸ್ವವೂ ತಮ್ಮ ಅಧೀನವಲ್ಲವೆ.

ವಿಕ್ರಮಕೇಸರಿ. ಹಾಗಾದರೆ ಈದಿನ ನಮ್ಮ ಯುವರಾಜನಿಗೋಸ್ಕರ ಪಟ್ಟಣದಲ್ಲೆಲ್ಲಾ ಮಹೋತ್ಸವವು ●ರವೇರಿಸಲ್ಪಡುತ್ತಿರುವುದು. ಮಂಗಳ ಪರಂಪರೆಯನ್ನು ಏಕಕಾಲದಲ್ಲಿ ಜಗದೀಶ್ವರನು ದಯಪಾಲಿಸಿರುವನಾದುದರಿಂದ ನಿನ್ನ ಪುತ್ರಿಯನ್ನು ಇಲ್ಲಿಗೆ ಕರೆಯಿಸು. ವಿವಾಹ ಮಹೋತ್ಸವವನ್ನು ನಾನೂ ನೋಡಿ ಸಂತೋಷಪಡುವೆನು.

ನಿರ್ಜರಕ. ಅಪ್ಪಣೆ. (ಎಂದು ಹೊರಟುಹೋಗುವನು)

ವಿಲಾಸಚಂದ್ರ. ಮಹಾರಾಜನೇ! ನನ್ನ ವಿಜ್ಞಾಪನೆಯೊಂದಿರುವುದು.

ವಿಕ್ರಮಕೇಸರಿ. ಅದೇನು?

ವಿಲಾಸಚಂದ್ರ. ಆಕೌಟಿಲ್ಯಶೇಖರನನ್ನು ಇಲ್ಲಿಗೆ ಕರೆಯಿಸಬೇಕೆಂದು ಪ್ರಾರ್ಥಿಸುವೆನು.

ವಿಕ್ರಮಕೇಸರಿ. ಅದರಲ್ಲಿ ದೋಷವೇನು. ( ಎಂದು ತೆರೆಯಕಡೆತಿರುಗಿ ) ಯಾರಲ್ಲಿ

ಚಾರ. ( ಪ್ರವೇಶಿಸಿ ) ಏನಪ್ಪಣೆ.

ವಿಕ್ರಮಕೇಸರಿ. ಕೌಟಿಲ್ಯನನ್ನು ಕರೆತರುವಂತೆ ಸೈನ್ಯಾಧಿಪತಿಗಾಜ್ಞಾಪಿಸು.

ಚಾರ. ಅಪ್ಪಣೆ. ( ಎಂದು ಹೋಗಿ ಕೌಟಿಲ್ಯನೊಡನೆ ತಿರುಗಿ ಪ್ರವೇಶಿಸುವನು ) ( ಅನಂತರ ಕ್ಷುಲಪಾಲಿಕಾ ಕುಸುಮಪ್ರಭೆಯರೊಡನೆ ಉತ್ಪಲಕುಮಾರಿಯೂ ನಿರ್ಜರಕನೂ ಪ್ರವೇಶಿಸುವರು )

ನಿರ್ಜರಕ. ( ಸಂತೋಷದಿಂದ ) ಮಹಾರಾಜನೇ! ಈ ಉಂಗುರವು ಕುಮಾರಿಯ ಬೆರಲಿನಲ್ಲಿತ್ತು. ( ಎಂದು ಕೊಡುವನು )

ವಿಕ್ರಮಕೇಸರಿ. ವತ್ಸೇ! ಉತ್ಪಲೇ! ಈ ವಿಲಾಸಚಂದ್ರನನ್ನು ವರಿಸುವೆಯಾ?

ಉತ್ಪಲೆ. ಉತ್ಪಲಾಹ್ಲಾದವು ಚಂದ್ರನಿಂದಲ್ಲದೆ ಮತ್ತಾರಿಂದಾದೀತು ?

ವಿಕ್ರಮಕೇಸರಿ. ಅಯ್ಯಾ ! ನಿರ್ಜರಕನೇ! ನಿನ್ನ ಪುತ್ರಿಯು ಅನುರೂಪನಾದ ವರನನ್ನೇ ಸೇರಿದಳು. ಲೋಕದಲ್ಲಿ ನೀನೇ ಧನ್ಯನು.

ನಿರ್ಜರಕ ಮಹಾರಾಜನ ಪ್ರೀತಿಗೆ ಪಾತ್ರನಾದ ನನಗೆ ನ್ಯೂನತೆಯೇನು? (ಎಂದು ಉತ್ಪಲೆಯ ಕೈಯನ್ನು ವಿಲಾಸಚಂದ್ರನ ಕೈಲಿಟ್ಟು) ಎಲೈ ವಿಲಾಸಚಂದ್ರನೆ! ಕುಮಾರಿಯು ಮೊದಲೇ ತನ್ನನ್ನು ನಿನಗೆ ದಾನ ಮಾಡಿರುವಳು. ಆದರೂ ಲೋಕರಂಜನಾರ್ಥವಾಗಿ ಈಗ ನಾನವಳನ್ನು ನಿನಗೊಪ್ಪಿಸಿರುವೆನು ನಾನು ಅಪುತ್ರನಾದುದರಿಂದ ನೀನೇ ನನಗೆ ಉತ್ತರಾಧಿಕಾರಿಯಾಗಿ ನಮ್ಮ ವಂಶವನ್ನು ಅಭಿವೃದ್ಧಿಗೊಳಿಸು.

ವಿಲಾಸಚಂದ್ರ ಅನುಗೃಹೀತನಾದೆನು.

ಅಮರದತ್ತ ಅಯ್ಯಾ! ಮಿತ್ರನೇ! ನಿನಗೆ ಮತ್ತಾವ ಮಂಗಳವನ್ನುಂಟು ಮಾಡಲಿ?

ವಿಲಾಸಚಂದ್ರ ಇದಕ್ಕಿಂತ ಅತಿಶಯವಾದುದು ಮತ್ತೇನಿರುವುದು,

ವೃ|| ನರಪತಿಯೊಲ್ಮೆಯುಮ್ಮೊಳನುಮಿಂ ನೆಲಸಿರ್ಪುದುಸಜ್ಜ
ನಕಳಾ | ದುರುಳರ ತಾರತಮ್ಯಮುಳಿಯೊಳ್ವಿಶದೀಕೃತ
ಮಾಯ್ತು ಚಂದದಿಂ || ಪರಿಹೃತಮಾದುದೆನ್ನಪಯಶಂ
ನಲಿದುತ್ಪಲೆಸೇರ್ದಳೆನ್ನನೀ|ಪರಿಪೆರತಾವಬಯ್ಕೆಯುಳಿದಿರ್ಪುದೆನ್ನೆಳಸಲ್ ಧರಿತ್ರಿಯೊಳ್||೧೧||

ಆದರೂ ಇದೊಂದು ಸಫಲವಾಗವಾಗಲಿ;

ವೃ|| ಶ್ರೀಕಲ್ಪಂ ಮಹಿಷಾಸುರಾಖ್ಯ ಪುರಮಂಪಾಲಿಕ್ಕೆ
ಕೃಷ್ಣೋರ್ವಿಪಂ | ಕ್ಷಿತಿಯೊಳ್ ಕ್ಷೇಮಂ ಸಮಸ್ತ ಸಸ್ಯ
ಕುಲದಿಂ ರಾಜಿಕ್ಕೆ ಕರ್ಣಾಟಕಂ || ವಿತತಾರೋಗ್ಯಮ
ನಿತ್ತು ಲೋಕಕನಿಶಂ ಕೈಗಾಯ್ಗೆ ಗೌರೀಧವಂ | ಸತತಂ
ತೋರುಗೆ ಬೀದಿಬೀದಿಗಳೊಳುಂ ಭದ್ರಂ ಶುಭಂ ಮಂಗಳಂ||೧೨||

(ಎಂದೆಲ್ಲರೂ ಹೊರಟುಹೋಗುವರು)

|| ಪಂಚಮಾಂಕಂ ಸಮಾಪ್ತಂ ||

—:o:—

ಕಂ|| ವಿಲಸದ್ಗಿರಿಜಾಗಿರಿಶ |
ಕೇಳಿನುಗ್ರಹದಿಂದೆ ಗರಪುರಶ್ರೀಕಂಠಂ ||
ಸಲೆಸಮೆದ್ದೈದುಂ ಕೃತಿಗಳ್ |
ಕೊಳಗುಗೆ ನರಸತಿಯುಮೆರೆವ ಪಂಚಪ್ರಾಣಂ ||೧೩||






ದಿ ಜನರಲ್ ಏಜೆನ್ಸಿ, ಪ್ರಿಂಟರ್ಸ್, ಮೈಸೂರು.

